

ಭಕುತ ಜನ ಮುಂದೆ ನೀನವರ ಹಿಂದೆ
ಯುಕುತಿ ಕೈಗೊಳ್ಳದು ಗಯಾ ಗದಾಧರನೆ ॥ ಪ ॥

ತಟ್ಟಿರಡು ಬಿಗಿದು ನದಿ ಕೂಸಿ ಪರಿವೃತ ಬರಲು
ಕಟ್ಟಿಲೆಯಿಂದ ಹರಿಗೋಲು ಹಾಕಿ
ನೆಟ್ಟನೆ ಆಚೀಚೆಗೆ ಪೋಗಿ ಬರುವಾಗ
ಹುಟ್ಟು, ಮುಂದಲ್ಲದೆ ಹರಿಗೋಲು ಮುಂದೆ ? –1–

ಕಾಳೆ ಹೆಗ್ಗಾಳೆ ದುಂದುಭಿ ಭೇರಿ ತಮಟೆ ನಿ
ಸ್ಸಾಳೆ ನಾನಾ ವಾದ್ಯ ಭೂಷಣಗಳು
ಸಾಲಾಗಿ ಬಳಿವಿಡಿದು ಸಂಭ್ರಮದಿ ಬರುವಾಗ
ಆಳು ಮುಂದಲ್ಲದೆ ಅರಸು ತಾ ಮುಂದೆ ? –2–

ಉತ್ಸವ ವಾಹನ ಬೀದಿಲಿ ಮೆರೆಯುತ ಬರಲು
ಸತ್ಸಂಗತಿಗೆ ಹರಿದಾಸರಲ್ಲದೆ
ವತ್ಸ ಸಿರಿ ವಿಜಯ ವಿಠ್ಠಲ ವೆಂಕಟಾಚಲ
ವತ್ಸ ಮುಂದಲ್ಲದೆ ಧೇನು ಮುಂದೆ ? –3–

–ಶ್ರೀ ವಿಜಯದಾಸರು.




ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವ್, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


**ಸಂಪುಟ ೧೮] ನವಂಬರ್ ೧೯೮೭ [ಸಂಚಿಕೆ ೭**


# ವಿಷಯಸೂಚಿ



ಮುಖಚಿತ್ರ : ತಿರುಮಲೆಯಲ್ಲಿನ ಗೀತೋಪದೇಶ ಕೃತಿ.

ಹಿಂಬದಿಯಲ್ಲಿ : ಶ್ರೀ ಪದ್ಮಾವತೀ ಅಮ್ಮನವರು ಹಾಗೂ ಚಕ್ರತ್ತಾಳ್ವಾರ್ (ತಿರುಚಾನೂರು ಬ್ರಹ್ಮೋತ್ಸವ).

ಒಳಗಡೆ : ತಿರುಮಲೆಯ ನೂತನ ಸಭಾಭವನ ಹಾಗೂ ಅಲಿಪಿರಿಯ ಬಳಿಯ ತಿ. ತಿ. ದೇ. ಅತಿಥಿಭವನದ ಉದ್ಘಾಟನೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್.

# ಸಂಪಾದಕೀಯ

ಗೀತೆಯೆಂದ ಕೂಡಲೇ ಮೊದಲು ನಮಗೆ ನೆನಪಿಗೆ ಬರುವುದು ಪೂಜಾಮಂದಿರ, ವ್ಯಾಸಪೀಠ, ಪುಸ್ತಕದ ಮೇಲೆ ಅಕ್ಷತೆ ಹಾಗೂ ಪುಷ್ಪ. ನಿಜ, ಭಾಗವತ, ಭಾರತ, ಭಗವದ್ಗೀತೆಗಳಿಗೆ ಅಂತಹ ಪಾರಾಯಣ ಪ್ರಾಧಾನ್ಯ ಪ್ರಾಶಸ್ತ್ಯಗಳಿವೆ. ಮೂಲವಾಗಿ ಪಾರಾಯಣ ಪ್ರಯೋಜನ ಏನು ? ನಿತ್ಯಮನನದಿಂದ ಗ್ರಂಥಗತ ವಿಶೇಷಗಳನ್ನು ಬೆದಕಿ, ಆಯಾ ವಸ್ತುಧರ್ಮವೈಚಿತ್ರ್ಯವನ್ನು ಅವಗಾಹನೆ ಮಾಡಿಕೊಂಡು, ಯಥಾಶಕ್ತಿಯಾಗಿ ಅಲ್ಲಿನ ಉನ್ನತಾಂಶಗಳನ್ನು, ಆದರ್ಶಗಳನ್ನು ಆಚರಣೆಗೆ ತಂದುಕೊಳ್ಳುವುದು, ಸಾಮಾನ್ಯರಿಗೂ ಸಂಪನ್ನರಿಗೂ ಇದು ಸಮಾನಧರ್ಮ.

ಈ ದೃಷ್ಟಿಯಿಂದ ಭಗವದ್ಗೀತೆಯನ್ನು ನೋಡುತ್ತಿದ್ದೇವೆಯೇ ? ಅದರ ಉನ್ನತಾಶಯವನ್ನು ಕರಗತ ಮನೋಗತ ಮಾಡಿಕೊಳ್ಳುತ್ತಿದ್ದೇವೆಯೇ ? ಎಂದರೆ ಇಲ್ಲವೆಂದೇ ಹೇಳಬೇಕು. ಅಷ್ಟಾದಶಾಧ್ಯಾಯಿ ಈ ಗೀತೆ ಸಮಾಜವಿಜ್ಞಾನಸರ್ವಸ್ವ ಎಂಬ ಭಾವನೆ ನಮಗೆ ಇನ್ನೂ ಬಂದಿಲ್ಲ. ಪಾರಾಯಣ ಪರಾಯಣತೆಯನ್ನು ಪಾರಲೌಕಿಕ ಪರಮಾರ್ಥದೊಂದಿಗೆ ಲೌಕಿಕ ಧರ್ಮ ಸಂಗ್ರಹವೆಂಬ ದೃಷ್ಟಿಯೊಂದಿಗೆ ಕೂಡಿಸಿದಲ್ಲಿ ಸಂಶಯಾತೀತವಾದ ಸತ್ಯ ಹೆಚ್ಚು ಖಚಿತವಾಗುತ್ತದೆ. ನಿಜಕ್ಕೂ ಭಗವದ್ಗೀತೆ ಸರ್ವಧರ್ಮ, ಕರ್ಮ ಪ್ರವೃತ್ತಿಗಳವರಿಗೆಲ್ಲ ಅನ್ವಯಿಸುವಂತಹ ಶಾಶ್ವತ ಸತ್ಯಗಳನ್ನು ಸಾರಿ ಹೇಳುತ್ತದೆ.

ಗೀತಾಬೋಧನೆ, ದೇಹಿಗೆ ದೇಹಕ್ಕೆ ಇರುವ ವ್ಯತ್ಯಾಸಗಳ ವಿವರಣೆಯಿಂದಲೇ ಆರಂಭವಾಗುತ್ತದೆ. ದೇಹಭ್ರಾಂತಿ ತಗ್ಗಿದ ಮನುಷ್ಯ ಅಹಂಕಾರ ಮಮಕಾರಗಳನ್ನು ತಗ್ಗಿಸಿಕೊಂಡು ಇತರ ಸತ್ಯಗಳನ್ನು ಅರ್ಥ ಮಾಡಿಕೊಳ್ಳ ಬಲ್ಲವನಾಗುತ್ತಾನೆ.

ಅನಂತಸಮಾಜದಲ್ಲಿ ಪರಿಮಿತ ಜೀವನದ ಮಾನವ ಹೇಗೆ ನಡೆಯಬೇಕು ?

ತನ್ನ ಆತುರ, ಕಾತರಗಳಿಗೆ–ಕೊನೆಗೆ–ತನ್ನ ಬುಡಕ್ಕೇ ನೀರುತಿದ್ದುವ ಕೋರಿಕೆಗಳನ್ನು ನಿಗ್ರಹಿಸಿ ಸುಖದುಃಖಗಳನ್ನು ಮಾನಾಪಮಾನಗಳನ್ನು ಸ್ತುತಿ ನಿಂದೆಗಳನ್ನು ಸಮಭಾವದಿಂದ ಸ್ವೀಕರಿಸಿ, ತನ್ನ ಪಾತ್ರಕ್ಕೆ ತಕ್ಕ ಕರ್ತವ್ಯ ನಿರ್ವಹಿಸಬೇಕು. ಅವರವರ ಕಾರ್ಯಗಳನ್ನು ಅವರವರು ಮಾಡಿಕೊಂಡು ಹೋಗಬೇಕು. ಇತರ ಹೊಣೆಗಳನ್ನು, ವಿಧಿಗಳನ್ನು ಸ್ವೀಕರಿಸುವುದಕ್ಕಿಂತ ತನ್ನ ವಿಧಿನಿರ್ವಹಣೆಯೇ ಲೇಸು.

ಕರ್ತವ್ಯಾಕರ್ತವ್ಯ ಸಂಶಯವುಂಟಾದಾಗ ತನ್ನ ಬುದ್ಧಿಯೊಂದಿಗೆ ತನಗಿಂತ ಹೆಚ್ಚು ತಿಳಿದವರ ಮೂಲಕ ತಿಳಿದುಕೊಂಡು, ಆಯಾ ಪ್ರವೃತ್ತಿ ಸಂಬಂಧವಾದ ಶಾಸ್ತ್ರಗಳನ್ನು ಪ್ರಮಾಣವಾಗಿ ಸ್ವೀಕರಿಸಬೇಕು.

ಪ್ರಪಂಚವೆಲ್ಲ ಪರಮಾತ್ಮ ಸ್ವರೂಪ. ಪಾಂಚಭೌತಿಕ ಕಾರಣಗಳಿಂದ, ಸತ್ತ್ವ ರಜಸ್ತಮಾದಿ ಗುಣಗಳ ವ್ಯತ್ಯಾಸಗಳಿಂದ ಅವುಗಳಿಗನುಗುಣವಾಗಿ ವಿವಿಧ ಪ್ರವೃತ್ತಿಗಳು ಮನೋವಿಕಾರಗಳು ಏರ್ಪಡುತ್ತವೆ. ಹಾಗಾಗಿಯೇ ಸಮಾಜಜೀವಿ ವಿವಿಧ ರೂಪಾಂತರ್ನಿಹಿತವಾದ ಪರಮಾತ್ಮತತ್ತ್ವವನ್ನು ಗೌರವಿಸುವುದನ್ನು ಕಲಿಯಬೇಕು.

ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣನಲ್ಲಿ, ಹಸುವಿನಲ್ಲಿ, ಆನೆಯಲ್ಲಿಯಾಗಲೀ ನಾಯಿಯಲ್ಲಿಯಾಗಲೀ, ನಾಯ ಮಾಂಸಭಕ್ಷಕನಲ್ಲಿಯಾಗಲೀ ಸಮಭಾವನೆ ಹೊಂದಿದವನೇ ನಿಜವಾದ ಜ್ಞಾನಿ. ಆ ಸ್ನೇಹಭಾವ, ಆ ಕರುಣೆ, ಸಹಾನುಭೂತಿ ಹೊಂದಿದವನೇ ಪರಮಾತ್ಮನಿಗೆ ಪ್ರಿಯ, ಭಗವತ್ಸ್ವರೂಪಕ್ಕೆ ಹತ್ತಿರದವ. ವಿಶ್ವ ಸಮಾಜಕ್ಕೆ ಇಷ್ಟು ಹೇಳಿದ ನಂತರ ವಿವಿಧ ಮಾರ್ಗಗಳ ವ್ಯಕ್ತಿಗಳು ಆತ್ಮೋನ್ನತಿಗೆ ಅವಲಂಬಿಸಬೇಕಾದ ಯೋಗ ಮಾರ್ಗಗಳನ್ನೂ, ಯೋಗ್ಯ ಮಾರ್ಗಗಳನ್ನು ಗೀತೆಯಲ್ಲಿ ವಿವರಿಸಲಾಗಿದೆ.

ಯಾರು ಯಾರಿಗೆ ಹೇಳಿದರು ಎಂಬ ಪಾತ್ರಗಳ ಹೆಸರನ್ನು ಬಿಟ್ಟರೆ ಗೀತಾಸಾರ, ಗೀತಾಸೂಕ್ತಿ ಸರ್ವ ಮಾನವ ಸಮಾದರಣೀಯ, ವಿಶ್ವಕಲ್ಯಾಣ ವೀಣಗಾನ, ಅಮೃತೋಪೇತ ರುಚಿರಾನ್ನ ಭಾಂಡ. ಸಾವಧಾನವಾಗಿ ಕುಳಿತು, ತೃಪ್ತಿಯಾಗಿ ಉಂಡು, ಆರೋಗ್ಯಕರವಾಗಿ ಅರಗಿಸಿಕೊಳ್ಳುವ ಭೋಕ್ತರೇ ಬೇಕು, ಎಲ್ಲಾದರೂ, ಎಂದಿಗಾದರೂ.

ಓಂ ಶಾಂತಿಃ ಶಾಂತಿಃ ಶಾಂತಿಃ



ಗರುಡೋತ್ಸವದಂದು ಸ್ವಾಮಿಗೆ ಆಂಧ್ರಪ್ರದೇಶದ ಸರ್ಕಾರದ ಪರವಾಗಿ ರೇಷ್ಮೆವಸ್ತ್ರವನ್ನು ತರುತ್ತಿರುವ ಮುಖ್ಯಮಂತ್ರಿ ಶ್ರೀ ಎನ್.ಟಿ. ರಾಮರಾವ್.

# ವೈಭವದಿಂದ ನಡೆದ ಸ್ವಾಮಿ ಬ್ರಹ್ಮೋತ್ಸವಗಳು

ನಿತ್ಯ ಕಲ್ಯಾಣ ಪಚ್ಚ ತೋರಣಗಳ ಸ್ವಾಮಿ ತಿರುಮಲೆ ರಾಯನ ವಾರ್ಷಿಕ ಬ್ರಹ್ಮೋತ್ಸವಗಳು ಸೆಪ್ಟೆಂಬರ್ 25 ರಿಂದ ಅಕ್ಟೋಬರ್ 3 ವರೆಗೆ ಯಶಸ್ವಿಯಾಗಿ ಭವ್ಯವಾಗಿ ವೈಭವದಿಂದ ಉತ್ಸಾಹದಿಂದ ನಡೆದವು.

ಬ್ರಹ್ಮೋತ್ಸವಗಳ ಸಮಯದಲ್ಲಿ ಸ್ವಾಮಿಯನ್ನು ನೋಡಲು ಬರುವ ಹೆಚ್ಚುಪರಿಯ ಯಾತ್ರಿಕ ಸಂದಣಿಯನ್ನು ಗಮನದಲ್ಲಿರಿಸಿಕೊಂಡು ಕಾರ್ಯ ನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿ ರಾಜು ಅವರ ನೇತೃತ್ವದಲ್ಲಿ ಯಶಸ್ವಿಯಾಥಪೂರ್ವ ಸಿದ್ಧತೆಗಳನ್ನು ಕೈಗೊಳ್ಳಲಾಗಿದ್ದಿತು. ಪ್ರತ್ಯೇಕ ಪ್ರವೇಶದ 25ರೂಗಳ ಕೌಂಟರನ್ನು ಎ.ಟಿ.ಸಿ.ಬಳಿ ಏರ್ಪಾಟು ಮಾಡಿ ಅಲ್ಲಿಂದ ನೇರವಾಗಿ ವೈಕುಂಠದೊಳಕ್ಕೆ ಹೋಗುವಂತೆ ಮಾಡಲಾಗಿದ್ದಿತು. ವಿವಿಧ ರೀತಿಯ ಔಷಧಗಳ ಸಿಂಪಡಿಕೆಯಿಂದ ನಗರ ನೈರ್ಮಲ್ಯ ಜಲಪಾರಿಶುದ್ಧ್ಯಗಳನ್ನು ಕಾಪಿಡಲಾಯಿತು. ತಿ. ತಿ. ದೇ. ವಿದ್ಯುತ್ ಶಾಖೆಯವರು ತಿರುಮಲೆಯನ್ನೆಲ್ಲ ವರ್ಣಮಯವಾದ ವಿದ್ಯುದ್ದೀಪಗಳಿಂದ ಅಲಂಕರಿಸಿದ್ದರು. ತಿ. ತಿ. ದೇ. ಉದ್ಯಾನವನ ಇಲಾಖೆಯವರು ವಿವಿಧ ರೀತಿಯ ಹೂವಿನ ಅಲಂಕಾರಗಳು ಆಕರ್ಷಣೀಯವಾಗಿದ್ದವು ಪ್ರತಿವರ್ಷದಂತೆ ಈ ವರ್ಷವೂ ಫಲ ಪುಷ್ಪ ಪ್ರದರ್ಶನ ಏರ್ಪಾಡಾಗಿದ್ದಿತು.

ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿನ ವಾಹನ ಸೇವೆಗಳನ್ನು ಭಕ್ತರ ಗೋವಿಂದ ನಾಮ ಸಂಕೀರ್ತನೆ, ವೇದ ಘೋಷ, ಮಂಗಳವಾದ್ಯ ಸಂಗೀತ, ಭಜನೆಗಳ ನಡುವೆ ನಡೆಸಲಾಯಿತು. ಜೊತೆಗೇ ಬೆಳಗಿನಿಂದ ಸಂಜೆಯವರೆಗೆ ಗೀತಾಪಾರಾಯಣ, ಭಜನೆ, ಧಾರ್ಮಿಕ ಉಪನ್ಯಾಸ ಹರಿಕಥೆ, ಪುರಾಣ, ಸಂಗೀತ, ನೃತ್ಯ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದ್ದಿತು. ಸರ್ವಶ್ರೀ ಮೇಡಸಾನಿ ಮೋಹನ್, ಎಸ್. ರಾಜಪ್ಪ ಕವಿ, ಡಿ. ರಾಮಮೂರ್ತಿ ಕೆ.ಅಪ್ಪಣ್ಣಾಚಾರ್ಯ-ಮೊದಲಾದವರು ಉಪನ್ಯಾಸಗಳನ್ನು ನೀಡಿ ಭಕ್ತಿಯ ಮಹತ್ವವನ್ನು ವೆಂಕಟೇಶ್ವರ ಸ್ವಾಮಿಯ ವೈಭವವನ್ನೂ ಎತ್ತಿ ಹಿಡಿದರು. ಸರ್ವಶ್ರೀ ಯು. ಶ್ರೀನಿವಾಸ್ (ಮೆಂಡೋಲಿನ್) ಟಿ. ಎನ್. ಕೃಷ್ಣನ್ (ವಯೋಲಿನ್) ಪಿ. ಸೀತಾರಾಂ (ವೇಣು) ಡಾ॥ ಚಿಟ್ಟಿಬಾಬು (ವೀಣೆ) ಲಾಲ್ಗುಡಿ ಜಯರಾಮನ್ (ವಯೋಲಿನ್) ಎಂ. ಎಸ್. ಗೋಪಾಲಕೃಷ್ಣನ್ (ವಯೊಲಿನ್) ಸುಧಾಪರಮಹಂಸ (ಗಾತ್ರ) ಟಿ. ಎನ್. ಶೇಷ ಗೋಪಾಲನ್ (ಗಾತ್ರ) ಓಲೇಟಿ ವೆಂಕಟೇಶ್ವರ್ಲು (ಗಾತ್ರ) ಮೊದಲಾದವರು ತಮ್ಮ ನಾದಸುಧಾರಸದ ಅಭಿಷೇಕ ಮಾಡಿದರು ಸ್ವಾಮಿಗೆ ಅನ್ನಮಾಚಾರ್ಯ ಪ್ರಾಜೆಕ್, ಕಲಾವಿದರೂ ತಿ. ತಿ. ದೇ. ಸಂಗೀತ ವಿದ್ಯಾಲಯದ ಅಧ್ಯಾಪಕ ವಿದ್ಯಾರ್ಥಿವೃಂದವೂ ಸ್ವಾಮಿಯನ್ನು ಸಂಗೀ ದಿಂದ ಅರ್ಚಿಸಿದವು. ದಿನವೂ ಬೆಳಗ್ಗೆ ಶ್ರೀ ಎ ಕೊಂಡಮಾಚಾರ್ಯ ಅವರ ಭಗವದ್ಗೀತಾವ ಚನ, ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಗ ಪುರಾಣ ಪ್ರವಚನಗಳ ಗುಂಜಾರವ ಬೆಟ್ಟದ ತುಂಬಿದ್ದಿತು. ಸರ್ವಶ್ರೀ ಜಿ. ಸೂರ್ಯನಾರಾಯಣ ವಿ. ಪಟ್ಟಾಭಿಭಾಗವತರ್, ಜಿ. ಭಾಸ್ಕರರಾವ ಶ್ರೀಮತಿಯರಾದ ಕೆ. ಇಂದಿರಾಬಾ ಟಿ. ದುರ್ಗಾಂಬ, ಡಿ. ಉಮಾಮಹೇಶ್ವರಿ ಮೊ ಲಾದವರ ಹರಿಕಥೆಗಳೂ ರಂಜಿಸಿದವು

ಬ್ರಹ್ಮೋತ್ಸವದ ದಿನಗಳಲ್ಲಿ ಮುಖ್ಯವಾದದ್ದು ಸ್ವಾಮಿಯ ಗರುಡ ಸೇವೆ. ಮದರಾಸಿನಿಂದ ನಡೆ ಕೊಂಡು ಅಂದು ತಿರುಮಲೆಯನ್ನು ಸೇರುವ ಮಂ ತರುವ ಶ್ವೇತ ಛತ್ರಗಳನ್ನು ನಾಲ್ಕು ಬೀದಿಯಲ್ಲ ಮೆರವಣಿಗೆ ಮಾಡಿ ನಂತರ ಸ್ವಾಮಿಗೆ ಅವುಗಳನ್ನು ಒಪ್ಪಿಸುವರು. ಶ್ರೀವಿಲ್ಲಿ ಪುತ್ತೂರಿನಿಂದ ಶ್ರೀ ಆಂಡಾಳ್ ದೇವಾಲಯದವರು ರೇಷ್ಮೆವಸ್ತ್ರಗಳನ್ನು ಜೊಡ್ಡ ಹೂವಿನ ಹಾರಗಳನ್ನು ಸ್ವಾಮಿಗೆ ಸಮರ್ಪಿ ಸುತ್ತಾರೆ. ಆಂಧ್ರಪ್ರದೇಶದ ಸರ್ಕಾರದ ಪರವಾ ಮುಖ್ಯಮಂತ್ರಿ ಸ್ವಾಮಿಗೆ ಮೇಲುಚಾತ್ ರೇಷೆ ವಸ್ತ್ರವನ್ನು ಸಮರ್ಪಿಸುವರು. ಮೈಸೂರು ಮಹಾರಾಜರು ಸ್ವಾಮಿಗೆ ಅರ್ಪಿಸಿದ ಮಕರ ಕಂಠಿ ಲಕ್ಷ್ಮೀಹಾರ, ಸಹಸ್ರನಾಮಹಾರ ಚಂದ್ರಹಾ ಮೊದಲಾದ ಆಭರಣಗಳನ್ನೂ ಉತ್ಸವ ಮೂರ್ತಿ

(37 ನೇ ಪುಟ ನೋಡಿ)



ಪುನರ್ನವೀಕರಿಸಿದ ಮುಕುರ ಮಂಟಪದ ಆರಂಭೋತ್ಸವದಲ್ಲಿನ ಒಂದು ದೃಶ್ಯ.

# ಶ್ರೀ ಪದ್ಮಾವತೀ ಸುಪ್ರಭಾತ

ಶ್ರೀಮತಿ ಲಲಿತಾನವಿಲೆ

ರಾಗ – ಸಾರಮತಿ ತಾಳ – ಆದಿ

ಏಳು ಎಚ್ಚರವಾಗು ಪದ್ಮಾವತಿ ನೀ
ಸುಪ್ರಭಾತವು ನಿನಗೆ ||
ಏಳು ಶ್ರೀದೇವಿ ಏಳು ಭೂದೇವಿ
ಎದ್ದು ತ್ರಿಲೋಕಂಗಳಿಗೆ ಶುಭವಂಗೈ ನೀ ||
ನಿನ್ನ ದರುಶನಕೆ ಭಕ್ತಾಗ್ರೇಸರರು
ಕ್ಷಣ ಒಂದು ಯುಗವಾಗಿ ಕಳೆದು ಕಾದಿಹರು
ಸಕಲಗುಣ ಸಾರಮತಿ ಮುದ್ದುಮುಖವಂದೋರಿ
ಶ್ರೀದೇವಿ ಎಮ್ಮನು ಧನ್ಯರಾಗಿಸು ನೀ || ಏಳು ||

2 ರಾಗ – ಹಂಸಧ್ವನಿ

ವನಿತೆಯರು ನಿನ್ನ ಪಾದ ಪದ್ಮಂಗಳನರ್ಚಿಸಲು
ಅರಿಸಿನ ಕುಂಕುಮ ಗಂಧ ಪುಷ್ಪಾದಿಗಳ
ಹಲಸು ತೆಂಗು ವೀಳ್ಯ ವಿವಿಧ ಭಕ್ಷ್ಯಂಗಳ
ಸಹಿತ ಹಂಸಧ್ವನಿ ಪಾಡಿ ಪೂಜೆಗೈಯ್ಯುತಿಹರು || ಏಳು ||

3 ರಾಗ – ಉದಯರವಿ ಚಂದ್ರಿಕ

ಉದಯರವಿ ತನ್ನ ಹೊಂಬಣ್ಣ ಕಿರಣಗಳ
ಜಗದೊಳು ಮೆಲ್ಲನೆ ಪಸರಿಸುತಿಹನು
ಇರುಳೊಳು ರಭಸದಿಂ ಭೋರ್ಗರೆವ ಅಂಬುಧಿ
ತಾಳ್ಮೆಯಿಂ ಮಂದದಿ ಅಲೆಯು ಬೀಸುತಿಹನು || ಏಳು ||

4 ರಾಗ – ಸಾಮ

ಉದಯಕಾಲದೊಳ್ ಪುಷ್ಕರಿಣಿಯಲಿ ಮಿಂದು
ಮೇಲು ಪೀತಾಂಬರ ಪಟ್ಟೆ ದೋತರ ಧರಿಸಿ
ಭಕ್ತಿಯಿಂದಲಿ ಸಾಮಗಾನವಂ ಪಾಡುತ
ಭಾಗವತರ ಮೇಳ ಬಿಜಯಂಗೈಯ್ಯುತಿದೆ || ಏಳು ||

5 ರಾಗ – ವಸಂತ

ಹಕ್ಕಿಗಳ ಇಂಚರ ಗಗನವ ಚುಂಬಿಸೆ
ಕೋಗಿಲೆ ಗಾನವು ವಸಂತವ ತೋರಿದೆ
ಮರಗಿಡಗಳು ತಮ್ಮ ಮೌನವ ಮುರಿದು
ಕಿಲಕಿಲ ನಗುತಲಿ ನಾಟ್ಯವಾಡುತಿವೆ || ಏಳು ||



6 ರಾಗ – ಮಯೂರಧ್ವನಿ

ದುಂಬಿಗಳ ಝೇಂಕಾರ ನಾದವು ತುಂಬಿ
ಗುಡಿಗಳ ಶಂಖ ಜಾಗಟೆ ನಾದವು
ಅಲೆ ಅಲೆಯಾಗಿ ಮಯೂರಧ್ವನಿ ಜತೆಗೂಡಿ
ಮೊಳಗಿ ಜಗವೆಲ್ಲ ಉದಯರಾಗ ಪಾಡುತಿದೆ || ಏಳು |

7 ರಾಗ – ಸಾರಂಗ

ಭಾನು ಜಗವನಪ್ಪಲು ಸಂಭ್ರಮವ ತೋರುತಿರೆ
ಶಶಿತಾರೆಗಳು ಲಜ್ಜೆಯಿಂ ಮರೆಯಾಗೆ
ವಿವಿಧ ಪುಷ್ಪಂಗಳು ಪರಿಮಳವ ಬೀರುತಿರೆ
ಸಾರಂಗ ತಾನೆದ್ದು ಕುಣಿಯುತಿದೆ ಹರುಷದಿಂ ॥ ಏಳು ॥

8 ರಾಗ – ಆಭೋಗಿ

ಗೋವು ತನ್ನ ಕರುವ ನೆನೆದು ಕರೆಯುತಿರೆ
ಗೋಪಿಯರಾಭೋಗಿ ಹಬ್ಬದಿ ಮೆರೆಯುತಿರೆ
ಗೋಪಾಲ ಬಾಲರು ಗೋವ್ಗಳ ಕೂಡಿ
ಉಲ್ಲಾಸದಿಂ ಕೊಳಲ ಗಾನಮಾಡುತಿಹರು ॥ ಏಳು ॥

9 ರಾಗ – ರಂಜನಿ

ಏಳು ಏಳಮ್ಮ ಏಳು ಅಲಂಕರಿಸಲು ನಿನ್ನ
ಸಖಿಯರು ಒಡ್ಯಾಣ ಮುತ್ತಿನಸರ ಕಂಕಣ
ಕಾಲ್ಗೆಜ್ಜೆ ಯುಂಗುರ ಜಡೆಬಿಲ್ಲೆ ರಾಗಟೆ
ರಂಜಿಪಾ ಭರಣಂಗಳ ಹಿಡಿದು ಕಾದಿಹರು ॥ ಏಳು ॥

10 ರಾಗ – ದಿವ್ಯಮಣಿ

ಮಲ್ಲಿಗೆ ಜಾಜಿ ಸೇವಂತಿಗೆ ಮುಡಿಯಲಿ
ನೊಸಲಲಿ ಕಸ್ತೂರಿ ತಿಲಕ ವಿರಾಜಿಸಿ
ಕೊರಳೊಳು ವಿವಿಧ ಸುವರ್ಣಮಾಲೆಗಳಿಂ
ಕಂಗೊಳಿಸುವ ದಿವ್ಯ ತಾರಾಮಣಿ ॥ ಏಳು ॥

11 ರಾಗ – ಹಂಸನಾದ

ಶ್ರೀಹರಿಯು ಮೋಹಿಸಿದ ಶ್ರೀ ವರಲಕ್ಷ್ಮಿ
ಶ್ರೀನಿವಾಸನು ಪ್ರೇಮಿಸಿದ ಪದ್ಮಾವತಿಯೇ
ಆದಿಶಕ್ತಿ ಮಾತೆ ಹಂಸನಾದ ಪ್ರಿಯೆ
ನಿನ್ನ ರೂಪ ಲಾವಣ್ಯಕೆ ಮನಸೋತ ಜಗದೊಡೆಯ ॥ ಏಳು ॥

12 ರಾಗ – ರಾಮಪ್ರಿಯ

ಭೂದೇವಿಯಾಗಿ ಶ್ರೀ ವೆಂಕಟೇಶನ ಒಲಿದೆ
ಅವನಿಜೆಯಾಗವತರಿಸಿ ರಘುರಾಮಪ್ರಿಯಳಾದೆ
ರುಕ್ಮಿಣಿಯಾಗಿ ಯದುವಂಶಜನ ವರಿಸಿದೆ
ಶ್ರೀ ವರಲಕ್ಷ್ಮಿ ಜಗವನುದ್ಧರಿಸಲು ॥ ಏಳು ॥

13 ರಾಗ – ಆಭೇರಿ

ಪಕ್ಷಿವಾಹನ ಶ್ರೀಹರಿಯು ರಣರಂಗದಿಂ
ಜಯಭೇರಿ ಮೊಳಗಿಸಿ ಬಂದಿಹನಾತುರದಿ
ಜಗದೊಡೆಯನು ತನ್ನ ವಿಜಯ ನಿನಗರುಹಲು
ಜಡಪಡಿಸುತಲಿ ತಾ ಹೊಸಿಲೊಳು ನಿಂದಿಹನು ॥ ಏಳು ॥

14 ರಾಗ – ಜ್ಯೋತಿಸ್ವರೂಪಿಣಿ

ಸರಸಿಜನಯನೆ ಜ್ಯೋತಿಸ್ವರೂಪಿಣಿ
ಅನುರೂಪ ಲಾವಣ್ಯ ಚಂದ್ರಮುಖಿ ಲಲಿತೇ
ತಿರುಪತೀಶನ ಕೈ ಹಿಡಿದು ಪದ್ಮಾವತಿ ನೀ
ವಿವಿಧ ರೂಪಂಗಳಲಿ ಭಕ್ತರ ಸಲಹಿದೆ ॥ ಏಳು ॥

15 ರಾಗ – ಪಾವನಿ

ಅಂಗನೆಯರು ಕೂಡಿ ಆರತಿ ಹಿಡಿದು
ತುಂಬು ಹರುಷದಿಂ ಬಂದು ನಿಂದು
ಲೋಕ ಪಾವನಿ ಸ್ತುತಿಸುತಿಹರು ಮುದದಿ
ಸರ್ವಸಂಪದೆ ಅಲಮೇಲುಮಂಗ ॥ ಏಳು ॥

16 ರಾಗ – ಅಮೃತವರ್ಷಿಣಿ

ತುಂಬುರು ನಾರದರು ಗಾನಮಾಡುತಿರೆ
ದೇವ ಕನ್ನೆಯರಮೃತವರ್ಷಿಣಿ ಕರೆಯುತಿರೆ
ಅಪ್ಸರ ಕನ್ನೆಯರು ಮೈ ಮರೆತು ನಾಟ್ಯವಾಡುತಿರೆ
ಈ ಪರಿ ಜಗವೆಲ್ಲ ಜಗಜಗಿಸುತಿದೆ ॥ ಏಳು ॥

17 ರಾಗ – ಚಾರುಕೇಶಿ

ನಿನ್ನ ಕಡೆಗಣ್ಣಿನ ನೋಟಕೆ ತಪಿಸುವ
ನಿನ್ನ ಪ್ರಿಯ ಭಕ್ತರ ಪಾಲಿಸು ಜಗದಂಬೆ
ಶಂಖ ಚಕ್ರಧಾರಿಣಿ ಚಾರುಕೇಶಿ
ತಿರುಪತೀಪುರ ಕ್ಷೇತ್ರವಿಹಾರಿಣಿ ॥ ಏಳು ॥

18 ರಾಗ – ಕಲ್ಯಾಣಿ

ನಿಖಿಳಲೋಕ ಜನನಿ ನಿತ್ಯಕಲ್ಯಾಣಿ
ನಿರುಪಮ ಸುಂದರ ಚಂದಿರ ವದನೆ
ಭವ ಭಯ ಹಾರಿಣಿ ಸರ್ವಪಾಪ ಶಮನಿ
ಹರಿಪ್ರಿಯೆ ರಮಣಿ ಶ್ರೀ ಅಲಮೇಲು ಮಂಗ ॥ ಏಳು ॥

19 ರಾಗ – ಗೌಳ

ಕ್ಷೀರ ಸಾಗರದೊಳ್ ಸಂತಸದಿಂ ವಿಹರಿಪ
ಕ್ಷೀರಾಂಬುಧಿ ತನಯೇ ಶ್ರೀ ಮಹಾಲಕ್ಷ್ಮಿ
ಗೌಳ ಭೂಷಿಣಿ ಸರ್ವಾಲಂಕೃತೆ
ಜಲಜನಾಭನ ಪ್ರಿಯರಮಣಿ ॥ ಏಳು ॥

20 ರಾಗ – ಮೋಹನ

ವೆಂಕಟೇಶ್ವರನ ಮನವನಪಹರಿಸಿ
ಅಂತರಂಗದಲಿ ಸ್ಥಿರಸ್ಥಾನವ ಪಡೆದ
ಮಂಗಾಪುರಿವಾಸಿನಿ ಮೋಹನಾಂಗಿ
ನಿರಂತರ ಹರಿಸೇವೆ ಭಾಗ್ಯ ಪಡೆದ ನೀ ॥ ಏಳು ॥

21 ರಾಗ – ನಳಿನಕಾಂತಿ

ಕುಂಕುಮ ವರ್ಣ ಪೀತಾಂಬರ ಧಾರಿಣಿ
ಕುವಲಯದಳ ನಯನೆ ಅಲಮೇಲುಮಂಗ
ಪಾಲಾಬ್ಧಿ ಸಂಜಾತೆ ನಳಿನಕಾಂತಿಯುತೇ
ಅನುದಿನ ನಿನ್ನ ದರುಶನ ಬೇಡುವೆ ॥ ಏಳು ॥

22 ರಾಗ – ಹೇಮವತಿ

ಭವ ಬಂಧಗಳ ಬಿಡಿಸು ಹೇಮವತಿ
ಭಕ್ತರು ನಿನ್ನ ಗುಣಗಾನವಂ ಮಾಡುತಿಹರು
ರತಿಯ ನಾಚಿಸುವ ರೂಪಲಾವಣ್ಯವತಿ
ನಿನ್ನ ಮುಖಾರವಿಂದವ ತೋರು ಎದ್ದೇಳು ಲಲಿತೇ ॥ ಏಳು ॥

(36 ನೇ ಪುಟ ನೋಡಿ)

# ಕನಕದಾಸ ಪ್ರಾಶಸ್ತ್ಯ

ಕನ್ನಡದಲ್ಲಿ ಕನಕದಾಸನು ಜನಪ್ರಿಯ ಕವಿಯಾಗಿಯೂ, ಶ್ರೇಷ್ಠ ವರ್ಗದ ಸಂಕೀರ್ತನಕಾರನಾಗಿಯೂ, ಮಹಾಭಕ್ತನಾಗಿಯೂ ಮಾನ್ಯನಾಗಿದ್ದಾನೆ. ಅವನು ಪುರಂದರದಾಸನ ಸಮಕಾಲಿಕನಾಗಿ ಸಮತೂಕದವನಾಗಿ ಸ್ವತಂತ್ರ ಕಾಂತಿಯುಳ್ಳ ಹರಿದಾಸನೆಂದು ಕೀರ್ತಿ ಗಳಿಸಿದ್ದಾನೆ. ಕನಕದಾಸ ಪುರಂದರದಾಸರು ದಾಸಸಾಹಿತ್ಯದಲ್ಲಿ ಅಶ್ವಿನೀ ದೇವತೆಗಳೆಂದೂ, ಕ್ರಮವಾಗಿ ಯಮಾಂಶ ನಾರದಾಂಶ ಸಂಭೂತರೆಂದೂ ಸಂಭಾವಿತರಾಗಿದ್ದಾರೆ. ಕನಕದಾಸನ ಬಗ್ಗೆ ಸಮಾಲೋಚಿಸುವ ಮುಂಚೆ ದಾಸಸಾಹಿತ್ಯದ ಉಗಮ ವಿಕಾಸಗಳಿಗೆ ಸಂಬಂಧಿಸಿದ ಹಿನ್ನೆಲೆಯನ್ನು ಸ್ವಲ್ಪ ಗಮನಿಸಬೇಕಾಗಿದೆ.

ಕ್ರಾಂತಿಕಾರಿಯಾದ ವೀರ ಶೈವ, ವೈದಿಕವಾದ ದ್ವೈತ-ಇವು ಎರಡೂ ಕನ್ನಡನಾಡಿನಲ್ಲಿ ಹುಟ್ಟಿ ಬೆಳೆದ ಧಾರ್ಮಿಕ ಪಂಥಗಳು. ಭಕ್ತಿಪ್ರಚಾರವೂ, ಸಮಾಜ ಕಲ್ಯಾಣವೂ ಇವೆರಡಕ್ಕೂ ಮುಖ್ಯವಾದ ಗುರಿಗಳು. ಗುರಿಸಾಧನೆಗಾಗಿ ಜನಸಾಮಾನ್ಯರ ಭಾಷೆಯನ್ನೇ ಇವೆರಡೂ ಬಳಸಿದವು. 12 ನೇ ಶತಮಾನದಲ್ಲಿ ಬಸವೇಶ್ವರರು ಶಿವಪಾರಮ್ಯದೊಂದಿಗೆ ಸ್ಥಿರಗೊಳಿಸಿದ ವೀರಶೈವದ ಕ್ರಾಂತಿಯಿಂದ ಸನಾತನ ವೈದಿಕ ಮತವು ಹಿಂದಕ್ಕೆ ಸರಿಯ ತೊಡಗಿತು. ಅನಂತರ ಮಧ್ವಾಚಾರ್ಯರು ಹರಿಪಾರಮ್ಯದೊಂದಿಗೆ ಸ್ಥಾಪಿಸಿದ ದ್ವೈತಮತ ವಿಕಾಸದಿಂದ ವೈದಿಕ ಧರ್ಮವು ಪುನಶ್ಚೇತನ ಹೊಂದಿತು. ಈ ದಿಶೆಯಲ್ಲಿ ತಮಿಳು ನಾಡಿನಿಂದ ವ್ಯಾಪ್ತಿ ಹೊಂದಿದ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವು ಬಹಳ ಸಹಕಾರ ನೀಡಿತು. ಮಧ್ವ ರಾಮಾನುಜರ ಮತಗಳಲ್ಲಿ ಹೆಚ್ಚಿನ ಭೇದ ಇಲ್ಲದಿರುವುದೇ ಇದಕ್ಕೆ ಮುಖ್ಯ ಕಾರಣ.

ಧರ್ಮ ಪ್ರಚಾರದಲ್ಲಿ ಶಿವಶರಣರು ಮನೋಹರವಾದ ವಚನ ಕವಿತೆಗಳನ್ನು ಬರೆದು ಏಕನಾದದೊಂದಿಗೆ ಹಾಡಿದರೆ, ಹರಿದಾಸರು ಮನೋಹರವಾದ ಕೀರ್ತನೆಗಳನ್ನು ಬರೆದು ತಂಬೂರಿಯೊಂದಿಗೆ ಹಾಡುತ್ತಾ ಕುಣಿಯುವುದೂ ಉಂಟು. ಅಷ್ಟೇ ಅಲ್ಲದೆ ದ್ವೈತರಲ್ಲಿ ಧಾರ್ಮಿಕ ತತ್ತ್ವವನ್ನು ಸಂಸ್ಕೃತದಲ್ಲಿ ಅರ್ಥೈಸುವ ಪಂಡಿತರಿದ್ದುದು ಒಂದು ವಿಶೇಷ. ಅಂಥವರನ್ನು ವ್ಯಾಸಕೂಟದವರೆಂದೂ, ಕೀರ್ತನಕಾರರನ್ನು ದಾಸಕೂಟದವರೆಂದೂ ಕರೆಯುವರು. ಈ ಎರಡು ಕೂಟಗಳಿಗೂ ಮಧ್ವಾಚಾರ್ಯರೇ ಮಾರ್ಗದರ್ಶಕರೆನ್ನುತ್ತಾರೆ.

**ಶ್ರೀ ಜಿ. ಚೆನ್ನಯ್ಯ**



16 ನೇ ಶತಮಾನದಲ್ಲಿ ರಾಜಮಾನ್ಯರಾಗಿ ವಿಜಯನಗರದಲ್ಲಿ ನೆಲೆಸಿದ ವ್ಯಾಸತೀರ್ಥ ಸ್ವಾಮಿಗಳ ಆಶ್ರಯದಲ್ಲಿ ವ್ಯಾಸ ದಾಸಕೂಟಗಳು ಎರಡೂ ನಾಡಿನ ಮೂಲೆ ಮೂಲೆಗೂ ಆಧ್ಯಾತ್ಮಿಕ ರಸ ಪ್ರವಾಹವನ್ನು ಹರಿಸಿದವು. ದಾಸಕೂಟದವರಲ್ಲಿ ಕನಕದಾಸ ಪುರಂದರದಾಸರು ವ್ಯಾಸರಾಯರಿಗೆ

ಎಡಬಲ ಭುಜಗಳಂತೆ ಮನ್ನಣೆ ಪಡೆದವರು. ಕವಿಯ ಜೀವನಕ್ಕೂ ಅವನ ಸಾಹಿತ್ಯಕೃತಿ ಸನ್ನಿಹಿತ ಸಂಬಂಧ ಇರುವುದರಲ್ಲಿ ಸಂದೇಹವಿಲ್ಲ. ಅನೇಕ ರಶ್ಮಿಯೂ ಅವನ ವ್ಯಕ್ತಿತ್ವ ಸಂದೇಶಗಳು ಪ್ರತಿಬಿಂಬಿಸುವುದು ಸಹಜ. ಆದುದರಿಂದ ಕನಕ ಸಾಹಿತ್ಯ ಪರಿಶೀಲನೆಗೆ ಪೂರ್ವರಂಗವಾಗಿ ಅವನ ಜೀವನದ ಮುಖ್ಯಾಂಶಗಳನ್ನು ಪಸ್ತಾಪಿಸುವುದು ಆವಶ್ಯಕವಾಗಿದೆ

ಕನಕದಾಸನು ಕುರುಬ ಜಾತಿಯಲ್ಲಿ ಹುಟ್ಟಿ ವೀರಕ್ಷತ್ರಿಯನಾಗಿ ಮೆರೆದವನು. ಅವನ ತಂದೆ ಬೀರಪ್ಪನಾಯಕನು ವಿಜಯನಗರ ಸಾಮ್ರಾಜ್ಯ ಭಾಗವಾದ ಬಾಡ ಮಂಡಲಕ್ಕೆ (ಧಾರವಾಡ ಜಿಲ್ಲೆ) ದಂಡನಾಯಕನಾದವನು. ತಿರುಪತಿ ತಿಮ್ಮಪ್ಪನ ಕೃಪೆಯಿಂದ ಹುಟ್ಟಿದ ಕನಕನ ಮೊದಲ ಹೆಸರು ತಿಮ್ಮಪ್ಪನಾಯಕ. ದಂಡನಾಯಕನಾದ ಬಳಿಕ ಕನಕರಾಶಿ ದೊರೆತ ಫಲವಾಗಿ ಅವನಿಗೆ ಕನಕ ನಾಯಕನೆಂದು ಹೆಸರು ಬಂದಿತು. ದಾಸನಾದ ನಂತರ ಅದೇ ಕನಕದಾಸನೆಂದಾಯಿತು. ಬಾಲ್ಯದಲ್ಲಿ ಕನಕನು ಕ್ಷತ್ರಿಯ ವಿದ್ಯೆಗಳ ಜೊತೆಗೆ ಸಂಗೀತ ಸಾಹಿತ್ಯಗಳನ್ನೂ ತಕ್ಕ ಮಟ್ಟಿಗೆ ಕಲಿತಿರುತ್ತಾನೆ.

ಕನಕನ ಪೂರ್ವಿಕರು ಬೀರಪ್ಪನ (ವೀರಭದ್ರಸ್ವಾಮಿ) ಭಕ್ತರಾದ ಶೈವಸಂಪ್ರದಾಯದವರು. ಆದರೆ ಅವನ ತಂದೆ ತಾಯಿಗಳು ರಾಮಾನುಜ ಶ್ರೀವೈಷ್ಣವ ಸ್ವೀಕರಿಸಿದವರು. ಕನಕನ ಮೇಲೆ ಮೊದಲು ಶ್ರೀವೈಷ್ಣವವು ಪ್ರಭಾವ ಬೀರಿತು. ಹರಿಭಕ್ತಿ ಚಿಕ್ಕಂದಿನಿಂದಲೇ ಬೆಳೆದು ಬಂದಿತು. ಇದಕ್ಕೆ ಕಾಗಿನೆಲೆಯಲ್ಲಿ ಅವನು ಕಟ್ಟಿಸಿದ ಆದಿಕೇಶವ ದೇವಾಲಯ ಒಂದು ನಿದರ್ಶನ. ಹರಿ ಪ್ರೇರಣೆಯಿಂದಲೇ ಅವನು ದಾಸನಾದನೆಂದು ಪ್ರಸಿದ್ಧಿ. ಎಳೆಯ ವಯಸ್ಸಿನಲ್ಲಿಯೇ ಪತ್ನೀವಿಯೋಗ, ಮಾತೃವಿಯೋಗ, ಯುದ್ಧದಲ್ಲಿ ಪರಾಜಯ– ಇವು ಕ್ರಮವಾಗಿ ಅವನಲ್ಲಿ ವೈರಾಗ್ಯ ಮೂಡುವುದಕ್ಕೂ ಭಕ್ತಿ ಭಾವ ಅರಳುವುದಕ್ಕೂ ಕಾರಣವಾಗಿವೆ. ಕೂಡಲೆ ಅರಸನ ಸೇವೆ ತೊರೆದು ಅವನು ಹರಿಸೇವಾ ನಿರತನಾಗಿದ್ದಾನೆ.

ದಾಸನಾದ ಬಳಿಕ ಕನಕನ ಸಹಜವಾದ ಪ್ರತಿಭೆ ಉಜ್ಜ್ವಲವಾಯಿತು. ಸಂಗೀತ ಸಾಹಿತ್ಯ ಜ್ಞಾನ ವಿಕಾಸಗೊಂಡಿತು. ಅವನಲ್ಲಿ ಮೊದಲಿದ್ದ ಶ್ರೀವೈಷ್ಣವ ತತ್ತ್ವಕ್ಕೆ ದ್ವೈತ ತತ್ತ್ವವು ಸಾಮರಸ್ಯ ತೋರಿದಿತು. ಈ ಮಾರ್ಪಾಟು ಉಂಟಾಗುವುದಕ್ಕೆ ವ್ಯಾಸತೀರ್ಥ, ಪುರಂದರದಾಸ, ವೈಕುಂಠದಾಸ, ವಾದಿರಾಜ, ಮುಂತಾದ ಮಹನೀಯರ ಸಾಹಚರ್ಯವೇ ಕಾರಣ. ಕನಕನ ಜೀವನ ಚರಿತಾರ್ಥತೆಗೆ ವ್ಯಾಸಮುನಿಗಳ ಅನುಗ್ರಹ ಅಮೃತವರ್ಷವಾಯಿತು.

## ದಾಸ ಜೀವನ :

ದಾಸಕೂಟದಲ್ಲಿ ಕನಕನ ಸ್ಥಾನವು ಬಹಳ ವಿಶಿಷ್ಟವಾದುದು. ಅಂದಿನ ಹರಿದಾಸರೆಲ್ಲರು ಬ್ರಾಹ್ಮಣರು, ಮಹಾವಿದ್ವಾಂಸರು. ಕನಕನಿಗೆ ಆ ಲಕ್ಷಣಗಳು ಇಲ್ಲದಿದ್ದರೂ ಸಹಜವಾದ ಪ್ರತಿಭಾ ವಿಶೇಷದಿಂದಲೇ ಸರ್ವಮಾನ್ಯನಾಗಿದ್ದಾನೆ. ಪುರಂದರದಾಸನು 'ಇವಗೆ ನಾಡೆಲ್ಲ ಹುಡುಕಿದರೂ ಈಡಾರಕಾಣೆ' ಎಂದು ಹೊಗಳಿರುವುದಲ್ಲದೆ ತಾನು ವೈಕುಂಠಕ್ಕೆ ಹೋಗುವ ಮುಂಚೆ ತನ್ನ ತುಂಬೂರಿಯನ್ನು ಕನಕನಿಗೆ ನೀಡಿದನೆಂಬುದು ಗಮನಾರ್ಹವಾಗಿದೆ. ವ್ಯಾಸರಾಯರು ಕನಕನ ಘನತೆಯ ಗುರುತಿಸಿಯೇ ಶಿಷ್ಯನಾಗಿ ಸ್ವೀಕರಿಸಿ ಮಂತ್ರೋಪದೇಶಕೊಟ್ಟರೆ..ವ್ಯಾಸರಾಯರು ಕನಕನನ್ನು ಕರುಣಿಸಿದ ವಿಚಾರ ಆಶ್ರಮದ ಪಂಡಿತರಲ್ಲಿ ಅಸಮಾಧಾನ ಉಂಟು ಮಾಡಿರುವುದು ಸ್ವಾಭಾವಿಕವೇ. ಅವರಿಗೆ ವ್ಯಾಸರು ಕನಕನ ಅಸಾಧಾರಣ ವ್ಯಕ್ತಿತ್ವವನ್ನು ನಿರೂಪಿಸಿ ಸಾಮರಸ್ಯ ಸಾಧಿಸ ಬೇಕಾಯಿತು. ಈ ಬಗ್ಗೆ ಕೆಲವು ಕಥೆಗಳಿವೆ.

ಒಂದು ದಿನ ಆಧ್ಯಾತ್ಮಿಕ ಚರ್ಚಾಸಮಯದಲ್ಲಿ ವ್ಯಾಸರು ಸದಸ್ಯರನ್ನು ಕುರಿತು ನಿಮ್ಮಲ್ಲಿ ಮೋಕ್ಷಕ್ಕೆ ಹೋಗಬಲ್ಲವರು ಯಾರು? ಎಂದು ಪ್ರಶ್ನಿಸಿದರಂತೆ. ಪಂಡಿತರೆಲ್ಲರು ಮೌನ ತಾಳಿರಲು ಕನಕನು 'ನಾನು ಹೋದರೆ ಹೋಗಬಹುದು' ಎಂದು ನುಡಿದು 'ನಾನು–ಎಂಬ ಅಹಂಕಾರ ಇಲ್ಲದವರಿಗೆ ಮೋಕ್ಷ ಸಿಗುವುದೆಂದು ವಿವರಿಸಿ, ಎಲ್ಲರನ್ನು ಮಂತ್ರ ಮುಗ್ಧರನ್ನಾಗಿ ಮಾಡಿದನಂತೆ. ಒಂದು ಏಕಾದಶಿಯದಿನ ವ್ಯಾಸರಾಯರು ಶಿಷ್ಯರಿಗೆ ಬಾಳೆಹಣ್ಣುಗಳುಕೊಟ್ಟು 'ಯಾರು ಇಲ್ಲದ ಕಡೆ ತಿನ್ನಿರಿ' ಎಂದರಂತೆ, ಪಂಡಿತರೆಲ್ಲರೂ ಗುಟ್ಟಾಗಿ ಅವುಗಳ ತಿಂದರೂ ಕನಕನು ಮಾತ್ರ ತಿನ್ನದೆ 'ಯಾರೂ ಇಲ್ಲದ ಸ್ಥಳವಿಲ್ಲ; ಭಗವಂತನು ಸರ್ವಾಂತರ್ಯಾಮಿ ಅಲ್ಲವೇ'. ಎಂದನಂತೆ. ಅವನ ಬುದ್ಧಿ ಕುಶಲತೆಗೆ ಪಂಡಿತರೆಲ್ಲರು ಆಶ್ಚರ್ಯಪಟ್ಟು ಅಂದಿನಿಂದಲು ಗೌರವ ನೀಡಿದರಂತೆ. ಕನಕದಾಸನು ಬಹಳ ಜಾಣನೆಂಬುದೇ ಇಂತಹ ಕಥೆಗಳ ತಾತ್ಪರ್ಯವಾಗಿದೆ.

ಲೋಕಾನುಭವ ಬೆಳೆದಂತೆಲ್ಲ ಕನಕನು ಮೇಲಾದ ಸಂಸ್ಕಾರಗಳೆಲ್ಲವನ್ನೂ ಸ್ವೀಕರಿಸಿದ್ದಾನೆ. ಅವನಲ್ಲಿ ಶ್ರೀವೈಷ್ಣವ ಮಧ್ವ ತತ್ತ್ವಗಳ ಜೊತೆಗೆ ಶಂಕರಾಚಾರ್ಯರ ಅದ್ವೈತ ತತ್ತ್ವವೂ ತನ್ನ ಮನೆತನಕ್ಕೆ ಸಹಜವಾದ ಶೈವತತ್ತ್ವವೂ ಅವಿಭಾಜ್ಯವಾಗಿ ಬೆರೆತು ಹೋದವು. ಅವನು ಯಾವೊಂದು ಧರ್ಮದ ಚೌಕಟ್ಟಿಗೂ ಸೀಮಿತವಾಗದೆ ಸರ್ವಧರ್ಮ ಸಾರಗ್ರಾಹಿ ಆಗಿದ್ದಾನೆ. ಹೀಗೆ ಕನಕನಲ್ಲಿ ಭಾಗವತ ದೃಷ್ಟಿ ಬೇರು ಬಿಟ್ಟಿದೆ. ಹರಿಯೇ ಹರನೆಂಬ ಏಕೇಶ್ವರ ವಿಶ್ವಾಸವನ್ನು ಹೊಂದಿದವನಾಗಿದ್ದಾನೆ. ವಾಣಿ ವಿಘ್ನೇಶ ಹನುಮಾದಿ ಸ್ತುತಿಗಳನ್ನು ಸಂಪ್ರದಾಯಾನುಸಾರ ಮಾಡಿದ್ದಾನೆ. ಆದರೆ ಮಾರಿ ಚೌಡಿ ಮುಂತಾದ ಶಕ್ತಿ ದೇವತೆಗಳನ್ನು ಅಂಗೀಕರಿಸದೆ ಅವು ಕೆಕ್ಕು ದೈವಗಳೆಂದು ತೆಗಳಿದ್ದಾನೆ, ಆ ದೇವತಾ ಪೂಜೆಗಳು ತಾಮಸಾಚಾರಗಳಿಂದ ಕೂಡಿರುವುದೇ ಇದಕ್ಕೆ ಕಾರಣವೆಂಬುದರಲ್ಲಿ ಸಂಶಯವಿಲ್ಲ.

ದಾಸ ಜೀವನದ ಬಹಳಷ್ಟು ಕಾಲವನ್ನು ಕನಕನು ತಿರುಪತಿ, ಕಾಗಿನೆಲೆಗಳಲ್ಲಿಯೂ, ಮಿಕ್ಕ ಕಾಲವನ್ನು ವಿಜಯನಗರ, ಉಡುಪಿ, ಬೇಲೂರು, ಮೇಲುಕೋಟೆ ಮುಂತಾದ ಪುಣ್ಯಕ್ಷೇತ್ರಗಳಲ್ಲಿಯು ಕಳೆದನೆಂದು ತಿಳಿಯುತ್ತದೆ. ಕೊನೆಗೆ ತಿರುಪತಿ ಶ್ರೀನಿವಾಸನ ಏಕಾಂತಸೇವಾ ನಿಮಗ್ನನಾಗಿ ಅದೃಶ್ಯನಾದನೆಂದು ಒಂದು ವದಂತಿ. ಅದೇ ರೀತಿ ಕಾಗಿನೆಲೆ ಆದಿಕೇಶವನ ಬಳಿಯಲ್ಲಿ ಮಾಯವಾದನೆಂದು ಮತ್ತೊಂದು ವದಂತಿ. ಕನಕದಾಸನದೆಂದು ಹೇಳಲ್ಪಡುವ ಸಮಾಧಿ ಒಂದು ಕಾಗಿನೆಲೆಯಲ್ಲಿರುವುದು ಎರಡನೆಯ ಅಭಿಪ್ರಾಯಕ್ಕೆ ಪೋಷಕವಾಗಿದೆ. ಕನಕನು 61 ವರುಷ ಕಾಲ (ಕ್ರಿ. ಶ.

(33 ನೇ ಪುಟನೋಡಿ)

# ತಿರುಮಂಗೈ ಆಳ್ವಾರ್

ದಕ್ಷಿಣಭಾರತದ ಆಳ್ವಾರ್ ಪರಂಪರೆಯಲ್ಲಿ ತಿರುಮಂಗೈ ಆಳ್ವಾರರು ಕೊನೆಯವರು. ಆಳ್ವಾರರು ಮಾರ್ಗದರ್ಶನ ಮಾಡಿರುವ ಭಕ್ತಿ ಪಂಥದಲ್ಲಿ ಇವರು ಅಗ್ರಗಣ್ಯರು. ಒಬ್ಬ ಸಾಮಾನ್ಯವ್ಯಕ್ತಿಯಾಗಿ ಜನಿಸಿ, ಅಧಿಕಾರ ಸಂಪಾದಿಸಿ, ವಿಷಯಾಭಿಲಾಷೆಯಿಂದ ವಿವಾಹಮಾಡಿಕೊಂಡು ಭಾಗವತಸೇವೆಮಾಡಿ ಪರಮಾತ್ಮನ ಅನುಗ್ರಹಪಡೆದು, ಸ್ವಾಮಿಯ ದರ್ಶನ ಭಾಗ್ಯಹೊಂದಿ ಕೃತಕೃತ್ಯರಾದ ಮಹಾತ್ಮರು ಇವರು. ಇವರ ಬಾಳು ಭವ್ಯ, ಪವಿತ್ರ ಮತ್ತು ಅತ್ಯಂತ ಹಿರಿದಾದುದು. ಇಂತಹ ಪುಣ್ಯಾತ್ಮರ ಜೀವನಚರಿತ್ರೆಯ ಪರಿಚಯವನ್ನು ಈ ಲೇಖನದಲ್ಲಿ ಮಾಡಿಕೊಡಲಾಗಿದೆ.

ಚೋಳಮಂಡಲದಲ್ಲಿ ತಿರುವಾಲಿ ತಿರುನಗರಿ ಎಂಬ ದಿವ್ಯಕ್ಷೇತ್ರ. ಅಲ್ಲಿ ಚತುರ್ಥ ವರ್ಣ ಸಂಸಾರದಲ್ಲಿ ತಿರುಮಂಗೈ ಜನಿಸಿದರು. ಅವರ ಕುಲಧರ್ಮವಾದ ಧನುರ್ವಿದ್ಯೆಯನ್ನು ಕಲಿತು ವಿದ್ಯಾಪಾರಂಗತರಾದರು. ತಮ್ಮ ಸ್ವಸಾಮರ್ಥ್ಯದಿಂದ ಸೈನ್ಯಾಧಿಕಾರಿಯಾಗಿ, ಚೋಳರಾಜನ ಗಮನಕ್ಕೆ ಪಾತ್ರರಾದರು. ಇವರ ಸಾಹಸ ಕೃತ್ಯಗಳನ್ನು ಮೆಚ್ಚಿ ಚೋಳರಾಜನು ಇವರನ್ನು ಸೇನಾಪತಿಯನ್ನಾಗಿ ನೇಮಿಸಿಕೊಂಡನು. ಅನಂತರ ರಾಜನು, ತಿರುಮಂಗೈಯವರನ್ನು ಒಂದು ಸಣ್ಣರಾಜ್ಯದ ಅಧಿಪತಿಯನ್ನಾಗಿಮಾಡಿ ಇವರಿಂದ ಕಪ್ಪಕಾಣಿಕೆ ಪಡೆಯುತ್ತಿದ್ದನು. ಹೀಗಿರುವಾಗ ತಿರುಮಂಗೈಯವರಿಗೆ ವಿಷಯಾಭಿಲಾಷೆ ಹೆಚ್ಚಿ ವಿವಾಹ ಮಾಡಿಕೊಳ್ಳಬೇಕೆಂಬ ಇಚ್ಛೆಯಾಯಿತು.

ತಿರುಮಂಗೈಯವರ ಜನ್ಮಸ್ಥಳವಾದ ತಿರುನಗರಿ ರಮಣೀಯಸ್ಥಾನ. ಅಲ್ಲಿಯ ಉದ್ಯಾನ ಅತ್ಯಂತ ಮನೋಹರವಾಗಿದ್ದಿತು. ದೇವಲೋಕದ ಅಪ್ಸರಸ್ತ್ರೀಯರು ವಿಹಾರಾರ್ಥವಾಗಿ ಅಲ್ಲಿಗೆ ಬರುತ್ತಿದ್ದರು. ಅಂತಹ ಅಪ್ಸರೆಯರಲ್ಲಿ ತಿರುಮಾಮಗಳ್ ಎಂಬ ಕನ್ಯೆ ಇದ್ದಳು. ಒಂದು ಸಲ ಅವಳು ಶಾಪಗ್ರಸ್ತಳಾಗಿ ಮಾನವರೂಪದಲ್ಲಿ ಉದ್ಯಾನವನದಲ್ಲಿ ನಿಲ್ಲಬೇಕಾದ ಪ್ರಸಂಗ ಬಂದಿತು. ಅವಳು ಅಲ್ಲಿ ಏಕಾಕಿನಿಯಾಗಿ ಇದ್ದಾಗ, ಆ ಊರಿನ ವೈದ್ಯಪಂಡಿತನೊಬ್ಬನು ಅವಳನ್ನು ನೋಡಿ, ವಿಚಾರಿಸಿದಾಗ, ಅವಳ ಪರಿಸ್ಥಿತಿ ಗೊತ್ತಾಯಿತು. ಮಕ್ಕಳಿಲ್ಲದೆ ಪರಿತಪಿಸುತ್ತಿದ್ದ ಪಂಡಿತನು ಆ ಕನ್ಯೆಯನ್ನು ತನ್ನ ಮಗಳಂತೆ ಭಾವಿಸಿ ಮನೆಗೆ ಕರೆದುಕೊಂಡುಹೋಗಿ ಸಲಹುತ್ತಿದ್ದನು. ಅವಳಿಗೆ ಕುಮುದವಲ್ಲಿ ಎಂದು ಹೆಸರಿಟ್ಟು ತನ್ನ ಮಗಳಂತೆ ಭಾವಿಸಿದ್ದನು. ಅತ್ಯಂತ ಸುಂದರಳಾದ ಕುಮುದವಲ್ಲಿಯು ಪ್ರಾಪ್ತವಯಸ್ಕಳಾದಳು. ಈ ವಿಚಾರ ಕರ್ಣಾಕರ್ಣಿಕೆಯಾಗಿ ತಿರುಮಂಗೈ ಅವರ ಗಮನವನ್ನು ಆಕರ್ಷಿಸಿತು. ಅವರು ಕೂಡಲೆ ಪಂಡಿತನ ಮನೆಗೆ ಬಂದು ಕುಮುದವಲ್ಲಿಯ ಸುಂದರರೂಪವನ್ನು ಮೆಚ್ಚಿ ವಿವಾಹಮಾಡಿಕೊಳ್ಳಲು ಇಚ್ಛಿಸಿದರು. ಕುಮುದವಲ್ಲಿಯ ಇಷ್ಟವನ್ನು ಕೇಳಲಾಗಿ, ಅವಳು ತಾನು ಸೂಚಿಸುವ ನಿಯಮಗಳನ್ನು ತಿರುಮಂಗೈಯವರು ಪಾಲಿಸುವುದಾಗಿ ವಚನವಿತ್ತರೆ, ತಾನು ವಿವಾಹಮಾಡಿಕೊಳ್ಳುವುದಾಗಿ ತಿಳಿಸಿದಳು. ಆ ನಿಯಮಗಳು ಹೀಗಿದ್ದುವು–

ತಿರುಮಂಗೈ ಅವರು, ತಾಪ, ಪುಂಡ್ರ, ನಾಮ, ಮಂತ್ರ ಮತ್ತು ಯೋಗ ಎಂಬ ಪಂಚಸಂಸ್ಕಾರಗಳನ್ನು ಪಡೆದು ಪರಮಭಾಗವತರಾಗಿ, ಪರಿವರ್ತನೆ ಹೊಂದಬೇಕು. ಒಂದು ವರ್ಷಕಾಲ ಪ್ರತಿದಿನವೂ ಒಂದು ಸಾವಿರಮಂದಿ ಭಾಗವತರಿಗೆ ಸಂತರ್ಪಣೆ ನಡೆಸಬೇಕು. ಈ ನಿಯಮಗಳನ್ನು ತಪ್ಪದೆ ಪಾಲಿಸುವುದಾಗಿ ಮಾತುಕೊಟ್ಟು ತಿರು–ಮಂಗೈ ಅವರು ಕುಮುದವಲ್ಲಿಯನ್ನು ವಿವಾಹವಾದರು. ಅವರು ಕೆಲವು ಕಾಲ ಭಾಗವತಸೇವೆ ನಡೆಸಿದರು. ಕಷ್ಟಕಾಲ ಅವರಿಗೆ ಪ್ರಾಪ್ತವಾಯಿತು.

ತಿರುಮಂಗೈ ಅವರ ಭಾಗವತ ಸೇವಾ ವೆಚ್ಚ ದಿನೇ ದಿನೇ ಹೆಚ್ಚಿತು. ಅವರ ಆರ್ಥಿಕ ಮುಗ್ಗಟ್ಟು ಸಹಿಸಲಾರದಷ್ಟಾಯಿತು. ಇದರಿಂದ ಚೋಳರಾಜನಿಗೆ ಪಾವತಿ ಮಾಡಬೇಕಾಗಿದ್ದ ಕಪ್ಪಕಾಣಿಕೆ ಬಾಕಿಯಾಯಿತು. ರಾಜನು ಕುಪಿತನಾಗಿ ತಿರುಮಂಗೈ ಅವರನ್ನು ಸೆರೆಮನೆಯಲ್ಲಿಟ್ಟನು. ಏಕಾಕಿಯಾದ ತಿರುಮಂಗೈ, ತಮ್ಮ ಭಾಗವತಸೇವೆಯು ತಪ್ಪಿತಲ್ಲಾ ಎಂಬ ಪರಿತಾಪದಿಂದ ಭಗವಂತನಲ್ಲಿ ಮೊರೆಯಿಟ್ಟರು. ಅವರ ಮನಸ್ಸು ಪರಿವರ್ತಿತವಾಯಿತು. ಭಕ್ತನ ಅನನ್ಯಭಕ್ತಿಯುತ ಮೊರೆಯನ್ನು ಪರಮಾತ್ಮನು ಕೇಳದಿರುವನೇ? ಆ ಕ್ಷೇತ್ರದಲ್ಲಿದ್ದ ವೇಗವತೀ ನದಿಯ ದಂಡೆಯಲ್ಲಿ ನಿಧಿ ದೊರೆಯುವುದಾಗಿ ತಿರುಮಂಗೈಯವರಿಗೆ ಸ್ವಪ್ನವಾಯಿತು. ಕೂಡಲೆ ಆ ಸ್ಥಳವನ್ನು ಪತ್ತೆಹಚ್ಚಿ ನೋಡಲಾಗಿ, ಅವರಿಗೆ ನಿಧಿ ಸಿಕ್ಕಿತು. ಆ ಹಣದಿಂದ ರಾಜನ ಕಪ್ಪವನ್ನು ಪಾವತಿಮಾಡಿ ಸೆರೆಮನೆಯಿಂದ ಬಿಡುಗಡೆ ಹೊಂದಿ, ಸ್ವತಂತ್ರರಾಗಿ ಅವರು ಭಾಗವತಸೇವೆ ಪುನಃಪ್ರಾರಂಭಿಸಿದರು. ಅದರೆ ಕೂಡಿದ ಹಣ ಎಲ್ಲಿಯವರೆಗೆ ಬಂದಿತು? ಪುನಃ ಆರ್ಥಿಕ ಮುಗ್ಗಟ್ಟು ಪ್ರಾರಂಭವಾಯಿತು. ಹೇಗಾದರು ಮಾಡಿ, ಭಗವಂತನ ಮೆಚ್ಚಿಕೆಗೆ ಪಾತ್ರವಾದ ಭಾಗವತ ಸೇವೆಯನ್ನು ನಿಲ್ಲಿಸಬಾರದೆಂದು ನಿರ್ಧರಿಸಿ, ದರೋಡೆವೃತ್ತಿಯನ್ನು ಕೈಗೊಂಡು, ತಮ್ಮ ಸೇವೆ ಮುಂದುವರಿಸಬೇಕಾಯಿತು.

ತಿರುಮಂಗೈ ಅವರಿಗೆ ತಾಳೂರುವಾರ್, ಸೀರ್ಮೇಲೆ ನಡಪ್ಪಾರ್, ನೀರಿಲ್ ಮರೈವಾರ್, ತೋರಾವಳಕ್ಕರ್ –ಎಂಬ ನಾಲ್ವರು ಮಂತ್ರಿಗಳು ಇದ್ದರು. ಒಂದು ಸಮರ್ಥವಾದ ಕುದುರೆಯೂ, ಒಂದು ಬಲಯುತವಾದ ಆನೆಯೂ ಇದ್ದಿತು. ಇಷ್ಟೆಲ್ಲ ಇದ್ದರೂ, ಇವರು ದರೋಡೆ ವೃತ್ತಿಯನ್ನು ಕೈಗೊಂಡು, ಭಾಗವತ ಸೇವೆಯೇ ಪರಮಾತ್ಮನ ಸೇವೆ ಎಂದು ನಂಬಿದ್ದರು.

ಶ್ರೀ ಡಿ. ಕೃಷ್ಣೈಂಗಾರ್

ಒಂದು ಪಾಪಜೀವನವು ಪುಣ್ಯಕರವಾಗ ಬೇಕಾದರೆ ಅದು ಪರಮಾತ್ಮನ ಸಂಕಲ್ಪ ದಿಂದ ಮಾತ್ರ ಸಾಧ್ಯ. ಪರಮಾತ್ಮನ ಕೃಪಾಕಟಾಕ್ಷದಿಂದ ಒಂದು ಕಲ್ಲು ಹಣ್ಣಾಯಿತು. ಭೂಮಿಯಲ್ಲಿ ಒಂದು ಮಗು ಸಿಕ್ಕಿತು. ಕಸದಲ್ಲಿ ರತ್ನ ದೊರಕಿತು. ತಿರುಮಂಗೈಯವರ ಪಾಪ ಜೀವನವು ಪವಿತ್ರವಾಗುವ ಕಾಲ ಸನ್ನಿಹಿತ ವಾಯಿತು. ಇದಕ್ಕೆ ಕುಮುದವಲ್ಲಿ ಕಾರಣ ಳಾದಳು. ಅಂತಹ ಸಂದರ್ಭವನ್ನು ಪರಮಾತ್ಮನೇ ಕರುಣಿಸಿದನು.

ಒಂದು ದಿವಸ ತಿರುಮಂಗೈ ಅವರು ದರೋಡೆಗಾಗಿ ದಾರಿಕಾಯುತ್ತಿದ್ದರು. ಒಂದು ದೊಡ್ಡ ಮರವನ್ನು ಹತ್ತಿ ಮಾರ್ಗ ದಲ್ಲಿ ಬರುವವರನ್ನು ನೋಡುತ್ತಿದ್ದರು. ಪರಮಾತ್ಮನು ಲಕ್ಷ್ಮೀಸಮೇತನಾಗಿ ನವವಧೂ ವರರ ವೇಷದಲ್ಲಿ ಸರ್ವಾಭರಣ ಭೂಷಿತ ನಾಗಿ ಬರುತ್ತಿದ್ದುದನ್ನು ಕಂಡರು. ತಿರು ಮಂಗೈ ಅವರ ಸಂತೋಷಕ್ಕೆ ಪಾರವೇ ಇಲ್ಲ ದಂತಾಯಿತು. ಮರದಿಂದ ಇಳಿದು ಧಾವಿಸಿ ನವವಧೂವರರ ಮುಂದೆ ಸಾಯುಧರಾಗಿ ನಿಂತು ಅವರ ಆಭರಣಗಳನ್ನು ಬಲಾತ್ಕಾರ ವಾಗಿ ತೆಗೆದು ಮೂಟೆ ಕಟ್ಟಿದರು. ಮೂಟೆಯು ಬಹು ಭಾರವಾಗಿ ಎತ್ತಲು ಅವರಿಗೆ ಸಾಧ್ಯವಾಗಲಿಲ್ಲ. ಏನೋ ಮಂತ್ರ ಹಾಕಿರುವುದಾಗಿ ವರನನ್ನು ಬೆದರಿಸಿದರು. ಮುಂದೆ ಬಂದು ತಲೆತಗ್ಗಿಸಿದರೆ. ಕಿವಿಯಲ್ಲಿ ಉಪದೇಶ ಮಾಡುವುದಾಗಿ ವರನು ಹೇಳಲು ಯಾರ ಮುಂದೆಯೂ ತಲೆಬಗ್ಗಿಸದವನು, ಈಗಲೂ ತಗ್ಗಿಸುವುದಿಲ್ಲವೆಂದು ತಿರುಮಂಗೈ ಹೇಳಿದರು. ಅವರು ತನ್ನ ಶಕ್ತಿಯನ್ನು ಹ ಯಿಂದ ಎಳೆದು ವರನನ್ನು ಹೊಡೆಯಲ ಕೈ ಎತ್ತಿದಾಗ ವಧೂವರರು ಮಾಯ ವಾದುದನ್ನು ಕಂಡರು. ತಕ್ಷಣ ತಲೆಯನ್ನು ಎತ್ತಿ ಆಕಾಶದ ಕಡೆ ನೋಡಿದಾಗ ಶ್ರೀಮನ್ನಾರಾಯಣನ ದಿವ್ಯಮಂಗ ವಿಗ್ರಹದ ದರ್ಶನವಾಯಿತು. ತಕ್ಷಣ ತಿರುಮಂಗೈಯರಿಗೆ ಜ್ಞಾನೋದಯ ವಾಯಿತು. ಪರಮಾತ್ಮನ ಪಾಂಚಜನ್ಯ ಸ್ಪರ್ಶ, ಧ್ರುವನ ಕಪೋಲಕ್ಕೆ ಆದ ತಕ್ಷಣ ಧ್ರುವನಿಗೆ ಜ್ಞಾನೋದಯವಾಗಿ ಪರಮಾತ್ಮ ನನ್ನು ಸ್ತೋತ್ರಮಾಡಿದನು. ಪರಮಾತ್ಮ ಅಭಯಹಸ್ತ ಪ್ರಹ್ಲಾದನ ತಲೆಗೆ ತಾಕಿದಾ ಅವನಿಗೆ ಪರಮಾತ್ಮನನ್ನು ಪ್ರಾರ್ಥಿ ಬೇಕೆಂಬ ಜ್ಞಾನ ಹುಟ್ಟಿತು. ಹಾಗೆಯೆ ತಿರುಮಂಗೈಯವರಿಗೂ ಅಷ್ಟಾಕ್ಷರಿ ಮಂತ್ರದ ಉಪದೇಶವಾದಂತಾಗಿ, ದರ್ಶ ವಾದ ತಕ್ಷಣ, 'ಕಂಡೇನ್ ನಾರಾಯಣ ಕಂಡೇನ್' ಎಂದು ಕುಣಿದು ಸಂತೋಷ ದಿಂದ ಕುಪ್ಪಳಿಸಿದರು. ಹಾಗೆಯೆ ಶ್ರೀಮನ್ನಾರಾಯಣನ ವೈಭವವನ್ನು ಪದ್ಯ ರೂಪದಲ್ಲಿ ಹಾಡಿದರು. ಪರಮಾತ್ಮನು ಗರುಡಾರೂಢನಾಗಿ, ಲಕ್ಷ್ಮೀನಾರಾಯಣ ರೂಪದಲ್ಲಿ ತಿರುಮಂಗೈಯವರಿಗೆ ದರ್ಶನ ವಿತ್ತ ಕೂಡಲೆ ಅವರ ಜೀವನ ಪವಿತ್ರ ವಾಯಿತು. ವೇದಾಂತಜ್ಞಾನ ಅವರಲ್ಲಿ ತಾನಾಗಿ ಸ್ಫುರಿಸಿತು. ಪರಮಾತ್ಮನ ಮಹಿಮೆಯನ್ನೂ, ವೈಭವವನ್ನೂ ಪ್ರಚಾರ ಮಾಡಬೇಕೆಂಬ ಉತ್ಕಟ ಇಚ್ಛೆಯೂ, ಜ್ಞಾನವೂ ಅವರಿಗೆ ಉಂಟಾಯಿತು. ಸರ್ವ ಶಕ್ತನಾದ, ಸಕಲಗುಣಸಂಪನ್ನನಾದ ಸ್ವಾಮಿ ಯನ್ನು ಪ್ರತ್ಯಕ್ಷವಾಗಿ ದರ್ಶನಮಾಡಿ, ಅನುಭವಿಸಿದ ರೀತಿಯನ್ನು ತಿರುಮಂಗೈ ಆಳ್ವಾರರಾಗಿ ವರ್ಣಿಸಿ ತಾವು ಕೃತಕೃತ್ಯ ರಾದುದಲ್ಲದೆ, ಇಡೀ ಭಕ್ತಕೋಟಿಗೆ ಮಾರ್ಗ ದರ್ಶಕರಾದರು. ಅವರು ಹಾಡಿರುವ ಕೆಲವು ಪದ್ಯಗಳು ಸರ್ವೋತ್ತಮ ತಮಿಳ ಸಾಹಿತ್ಯ ವಾಗಿರುವುದಲ್ಲದೆ, ಅವರ ಪಶ್ಚಾತ್ತಾಪ ಬುದ್ಧಿಯ ದೀರ್ಘವಾದ ನಿಟ್ಟುಸಿರೋ ಎನ್ನುವಷ್ಟು ಸೊಗಸಾಗಿವೆ.

ತಿರುಮಂಗೈ ಆಳ್ವಾರರವರು ದಕ್ಷಿಣ ಭಾರತದ ಅನೇಕ ವೈಷ್ಣವ ದೇವಾಲಯ

(32 ನೇ ಪುಟ ನೋಡಿ)

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾ ವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಿಮೆಯವರಲ್ಲದ ಸ್ಥಳೀಯ ದೇವಾಲಯ ಆಡಳಿತಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತು ಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯ ನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

# ಭಗವದಪರಾಧಗಳು

"ಬುದ್ಧಿಮತ್ಸು ನರಾಃ ಶ್ರೇಷ್ಠಾಃ" ಬುದ್ಧಿಜೀವಿಗಳಲ್ಲಿ ಶ್ರೇಷ್ಠರಾದವರು ಮಾನವರು. ದೈವದತ್ತವಾಗಿ ಬಂದ ಈ ವಿಶಿಷ್ಟ ಬುದ್ಧಿಯನ್ನು ಹೊಂದಿದ ಮನುಷ್ಯನು ಶಾಸ್ತ್ರನಿಷಿದ್ಧವಾದ, ಅಹಿತವಾದ ಕಾರ್ಯವನ್ನು ಎಂದೂ ಮಾಡಬಾರದು. ಇಂತಹ ಶಾಸ್ತ್ರನಿಷಿದ್ಧವಾದ ಕಾರ್ಯಾನುಷ್ಠಾನಗಳೇ "ಅಪರಾಧ" ಎಂದು ಎನಿಸಿಕೊಳ್ಳುವುದು. "ಅಕಾರ್ಯಾದಿ ದೋಷಃ ಅಪರಾಧಃ" ಎಂದು ಕೋಶಕಾರರು ಈ ಅಪರಾಧ ಎಂಬ ಪದವನ್ನು ವಿಶ್ಲೇಷಿಸಿದ್ದಾರೆ. ಅಕಾರ್ಯಕರಣವೇ ಅಪರಾಧ. ಈ ಅಪರಾಧ ಯಾರಿಂದಲೂ ಎಂದೂ ಆಗಬಾರದು.

ದೇಶಭೇದದಿಂದ ಆಗುವ ಅಪರಾಧಗಳು ಕೆಲವಾದರೆ, ಕೆಲವು ಕಾಲಭೇದದಿಂದ ಆಗತಕ್ಕವು. ಸರ್ವಜನೋಪಯೋಗಿಗಳಾದ ಜಲಾಶಯಗಳಲ್ಲಿ ಮಲಮೂತ್ರಾದಿಗಳನ್ನು ವಿಸರ್ಜಿಸುವುದು ದೇಶಗತ ಅಪರಾಧ. ಸೂರ್ಯೋದಯಾಸ್ತಗಳಲ್ಲಿ ನಿದ್ರಿಸುವುದು ಕಾಲಗತ ಅಪರಾಧ. ಇದರಂತೆ ವ್ಯಕ್ತಿಭೇದದಿಂದಲೂ ಅಪರಾಧಗಳು ಭಿನ್ನವಾಗುವುವು. ಚಿಕ್ಕಮಗುವು ಮಾಡಿದ ಅಪರಾಧವೊಂದನ್ನು ದೋಷವೆಂದು ಎಣಿಸದಿದ್ದರೂ, ಅದೇ ಅಪರಾಧ ಹಿರಿಯರಿಂದ ಮಾಡಲ್ಪಟ್ಟಾಗ ದಂಡನೀಯವಾಗುತ್ತದೆ.

ಈ ಅಪರಾಧರಹಿತವಾದ ಜೀವನವನ್ನೇ 'ಸದಾಚಾರ',—ಇದನ್ನೇ ಇನ್ನೊಂದು ರೀತಿಯಿಂದ "ಧರ್ಮ" ಎಂದು ಕರೆಯಬಹುದು. ಈ ಧರ್ಮದ ರಕ್ಷಣೆಯೇ ಮಾನವನ ರಕ್ಷಣೆ. "ಧರ್ಮೋ ರಕ್ಷತಿ ರಕ್ಷಿತಃ" ಇದೇ ಧಾರಣೆಗೆ ಅರ್ಹವಾದದ್ದು - ಧಾರಣಾದ್ಧರ್ಮ ಇತ್ಯಾಹುಃ.

ವಯಸಃ ಕರ್ಮಣೋಽರ್ಥಸ್ಯ
ಶ್ರುತಸ್ಯಾಭಿಜನಸ್ಯ ಚ |
ವೇಷವಾಗ್ಬುದ್ಧಿ ಸಾರೂಪ್ಯ
ಮಾಚರ್ನ್ ವಿಚರೇದಿಹ ||

ಎಂಬುದು ಮನುವಿನ ಆದೇಶ. ವಯಸ್ಸು, ಕರ್ಮ, ಅಧ್ಯಯನ, ಕುಲ, ಇತ್ಯಾದಿಗಳ ಭಿನ್ನತೆಯಿದ್ದರೂ, ಅವುಗಳಿಗೆ ತಕ್ಕಂತೆ ಅಪರಾಧ ರಹಿತವಾದ ಬದುಕನ್ನು ಸಾಗಿಸಬೇಕು.

ಅಪರಾಧವನ್ನು ಮಾಡುವುದು ಪಾಪಕರ. ಜ್ಞಾತವಾಗಲೀ, ಅಜ್ಞಾತವಾಗಲೀ ಎರಡೂ ದೋಷವೇ. ಮನುಷ್ಯನು ಸಾಕಿದ ಪಶುವೊಂದು ತಪ್ಪು ಮಾಡಿದರೆ, ಅದರ ಮಾಲೀಕನಿಗೆ ಶಿಕ್ಷೆಯನ್ನು ವಿಧಿಸುವುದು ಲೋಕನಿಯಮ. ಇದು ಅಜ್ಞಾತ ಎಂದು ಸುಮ್ಮನೆ ಇರುವುದಿಲ್ಲ.

ಕೆಲವೊಮ್ಮೆ ಅಪರಾಧಗಳಿಗೆ ಶಿಕ್ಷೆಯಾದ ನಂತರ ಅದು ಒಂದು ವಿಧವಾದ ಪ್ರಾಯಶ್ಚಿತ್ತ ಎಂದರೂ, ಇದರಿಂದ ದೋಷ ಪರಿಹಾರ ಸಾಧ್ಯವಾದರೂ, ಅಪರಾಧ ಆಗದಿರುವಂತೆ ನೋಡಿಕೊಳ್ಳುವುದೇ ಒಳ್ಳಿತು. "ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ" ಎಂಬ ಸೂಕ್ತಿಯಂತೆ, ಕೆಸರನ್ನು ತುಳಿದು ಕಾಲು ತೊಳೆದುಕೊಳ್ಳುವುದಕ್ಕಿಂತ, ತುಳಿಯದೇ ಇರುವುದೇ ಒಳ್ಳಿತು.

ಮಾನವನು ಈ ಸಂಸಾರಸಾಗರದಲ್ಲಿ ಹಲವಾರು ಕಷ್ಟಕಾರ್ಪಣ್ಯಗಳಿಗೆ ಒಳಗಾದಾಗ "ಸಂಕಟ ಬಂದಾಗ ವೆಂಕಟರಮಣ" ಎಂಬಂತೆ ದೈವೀಶಕ್ತಿಗೆ ಮರೆಹೋಗುತ್ತಾನೆ.

ಅಪರಾಧ ಸಹಸ್ರಾಣಿ
ಕ್ರಿಯಂತೇಽಹರ್ನಿಶಂ ಮಯಾ |
ದಾಸೋಽಹಮಿತಿ ಮಾಂ ಬುದ್ಧ್ವಾ
ಕ್ಷಮಸ್ವ ಪುರುಷೋತ್ತಮ ||

ಎಂದು ಪ್ರಾರ್ಥಿಸುತ್ತ ಸಹಜವಾಗಿಯೇ ತನ್ನ ತಪ್ಪುಗಳನ್ನು ಒಪ್ಪಿಕೊಂಡು ಕ್ಷಮಿಸುವಂತೆ ಬೇಡಿಕೊಳ್ಳುತ್ತಾನೆ. ಅತಿಶಯವಾದ ಭಕ್ತಿಯಿಂದ, ಅನನ್ಯಭಾವನೆಯಿಂದ ಬೇಡಿಕೊಂಡರೂ ಅವನ ಪ್ರಾರ್ಥನೆ ಸಫಲವಾಗುವುದಿಲ್ಲ. ಇದಕ್ಕೆ ಮುಖ್ಯ ಕಾರಣ. ದೇವತಾಸನ್ನಿಧಿಯಲ್ಲಿ ಆತನು ಮಾಡುವ ಅಪರಾಧಗಳು. "ಅನ್ಯಕ್ಷೇತ್ರೇ ಕೃತಂ ಪಾಪಂ ಪುಣ್ಯಕ್ಷೇತ್ರೇ ವಿನಶ್ಯತಿ | ಪುಣ್ಯಕ್ಷೇತ್ರೇ ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ" ಎಂಬಂತೆ ಅಲ್ಲಿ ಮಾಡಿದ ಅಪರಾಧ ವಜ್ರಲೇಪವಾಗಿರುತ್ತದೆ.

ಈ ಅಪರಾಧಗಳು ಸಂಖ್ಯೆಯಲ್ಲಿ ಮೂವತ್ತೆರಡನ್ನು ಆಗಮ ಶಾಸ್ತ್ರಗಳಲ್ಲಿ ಉಲ್ಲೇಖಿಸಲಾಗಿದೆ.

ಯಾನೈರ್ವಾ ಪಾದುಕೈರ್ವಾಪಿ
ಗಮನಂ ಭಗವದ್ಗೃಹೇ |
ದೇವೋತ್ಸವಾದ್ಯಸೇವಾಚ
ಅಪ್ರಣಾಮಸ್ತದಗ್ರತಃ |
ಉಚ್ಛಿಷ್ಟೇಽಥವಾಶೌಚೇ
ಭಗವದ್ದರ್ಶನಾದಿಕಂ |
ಏಕ ಹಸ್ತ ಪ್ರಣಾಮಂ ಚ
ತತ್ಪುರಸ್ತಾತ್ಪ್ರದಕ್ಷಿಣಂ ||

ವಾಹನಗಳಲ್ಲಿ ಅಥವಾ ಪಾದರಕ್ಷೆಯನ್ನು ಧರಿಸಿ ದೇವಾಲಯಕ್ಕೆ ಹೋಗುವುದು, ದೇವರ ಉತ್ಸವಗಳಲ್ಲಿ ಸೇವಿಸದಿರುವುದು, ಮುಂಭಾಗದಲ್ಲಿ ನಮಸ್ಕರಿಸದಿರುವುದು, ಉಚ್ಛಿಷ್ಟ (ಎಂಜಲು) ಅಥವಾ ಅಶೌಚದಲ್ಲಿ ಭಗವದ್ದರ್ಶನಾದಿಗಳನ್ನು ಮಾಡುವುದು, ಒಂದು ಕೈಯ್ಯಲ್ಲಿ ನಮಸ್ಕರಿಸುವುದು, ಮುಂಭಾಗದಲ್ಲಿ ಪ್ರದಕ್ಷಿಣ ಮಾಡುವುದು.

ಪಾದಪ್ರಸಾರಣಂ ಚಾಗ್ರೇ
ತಥಾ ಪರ್ಯಂಕ ಬಂಧನಂ |
ಶಯನಂ ಭಕ್ಷಣಂ ವಾಪಿ
ಮಿಥ್ಯಾಭಾಷಣಮೇವ ಚ ||

(31ನೇ ಪುಟ ನೋಡಿ)

ಶ್ರೀ ಬಿ. ಬಾಲಗಣಪತಿ ಭಟ್ಟ

# ಶ್ರೀ ವೇಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೇಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೇಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಉತ್ತರ ದೇಶದ ವಿಷ್ಣು ಕ್ಷೇತ್ರಗಳು

12 ಶತಮಾನಗಳ ಹಿಂದಿನ ಆಳ್ವಾರರುಗಳು ಅವತರಿಸಿದ ಇಂದಿನ ತಮಿಳುನಾಡಿಗೆ ಇಂದಿನ ಆಂಧ್ರ ಪ್ರದೇಶ, ಒರಿಸ್ಸಾ, ಉತ್ತರ ಭಾರತ– ಇತ್ಯಾದಿ ಉತ್ತರದಲ್ಲಿನ ಎಲ್ಲ ಪ್ರದೇಶಗಳೂ ಉತ್ತರ ದೇಶವೇ ಆಗಿತ್ತು. ಆದುದರಿಂದ ಅವುಗಳನ್ನೆಲ್ಲ ಒಟ್ಟಿಗೆ ವಡನಾಡು (ಉತ್ತರದೇಶದ) ತಿರುಪತಿಗಳು ಎಂದು ಭಕ್ತರುಗಳು ಕರೆಯು ತೊಡಗಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ

ಈ ವಿಷ್ಣು ಕ್ಷೇತ್ರಗಳನ್ನೂ ಸಂದರ್ಶಿಸಲು ಒಂದು ನಿರ್ದಿಷ್ಟಯೋಜನೆಯನ್ನು ಹಾಕಿ ಕೊಳ್ಳು ವುದು ಒಳ್ಳೆಯದು. ಸುಮಾರು ಹನ್ನೊಂದು ಕ್ಷೇತ್ರ ಗಳು–ಅವುಗಳಿಗೆ ಸಂಬಂಧ ಪಟ್ಟಂತಹ ಅನೇಕ ಉಪಕ್ಷೇತ್ರಗಳು ಇವೆ. ನೇರವಾಗಿ ಭಕ್ತರು ಈ ಸ್ಥಳ ಗಳಿಗೆ ಹೋಗಿ ಬರುವುದು ಕಷ್ಟ. ರೈಲು ಇಲ್ಲವೆ ಬಸ್ ಪ್ರಯಾಣ ಈಗ ಅಷ್ಟು ಸುಲಭ ಸಾಧ್ಯವೂ ಅಲ್ಲ, ಸುಖಕರವೂ ಅಲ್ಲ. ಯಾವುದಾದರೊಂದು ಟೂರಿಸ್ಟ್ ಏಜನ್ಸಿಯ ಮುಖಾಂತರವೇನೊ ಹೋಗಿ ಬರಬಹುದು; ಆದರೆ ಕೆಲವೊಂದು ಕ್ಷೇತ್ರ ಗಳಿಗೆ ಟೂರಿಸ್ಟ್ ನವರು ಹೋಗುವುದಿಲ್ಲ. ಆದುದ ರಿಂದ ಭಾರತಾದ್ಯಂತ ಹರಡಿರುವ ಈ ಕ್ಷೇತ್ರಗ ಳನ್ನು ಸೂಕ್ತ ಋತುಗಳಲ್ಲಿ ಐದಾರು ಜನ ಗುಂಪಾಗಿ ಹೋಗಿ ಬರಬಹುದು. ದೂರದೂರದ ಪ್ರಯಾಣವಾಗಿರುವುದರಿಂದ ಜೊತೆಯಲ್ಲಿ ಒಂದಷ್ಟು ತಿಂಡಿ, ತಿಂಡಿ ಸಿದ್ಧ ಮಾಡಿ ಕೊಳ್ಳುವ ಉಪಕರಣಗಳನ್ನೂ ಕೊಂಡೊಯ್ಯುವುದು ಒಳ್ಳೆ ಯದು.

## ತಿರುಪತಿ

ಭಾರತದ ಅತ್ಯಂತ ಪ್ರಾಚೀನ ಪುಣ್ಯಕ್ಷೇತ್ರಗ ಳಲ್ಲಿ ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆಯ ಚಂದ್ರಗಿರಿ ತಾಲ್ಲೂಕಿನಲ್ಲಿರುವ ಸುಪ್ರಸಿದ್ಧ ವೈಷ್ಣವ ಕ್ಷೇತ್ರ "ತಿರುಪತಿ" ಬಹಳ ಮುಖ್ಯವಾದುದು. ಇಂದು ಈ ಕ್ಷೇತ್ರವೂ ಜಗದ್ವಿಖ್ಯಾತವಾಗಿದ್ದು. ಪ್ರತಿ ವರ್ಷ ಕೋಟ್ಯಾಂತರ ಭಕ್ತರನ್ನು ಆಕರ್ಷಿಸುತ್ತಿದೆ. ಎಲ್ಲ ವಿಷ್ಣು ಕ್ಷೇತ್ರಗಳಿಗೂ "ತಿರುಪತಿ" ಎನ್ನುವ ಅಭಿನಾಮವನ್ನು ನೀಡಿರುವುದು ಈ ಕ್ಷೇತ್ರದ ಜನ ಪ್ರಿಯತೆಯನ್ನು ತೋರಿಸುತ್ತದೆ. ಸುಮಾರು 2000 ವರ್ಷಗಳಿಂದಲೂ ಈ ದಿವ್ಯದೇಶವು ಭಕ್ತರ ಕಣ್ಮಣಿಯಾಗಿರುವುದು, ಇದು ಇನ್ನೊಂದು ವಿಶೇಷ. ಪ್ರಪಂಚದ ಬೇರೆಯಾವುದೇ ಧರ್ಮದ ಯಾವುದೇ ಪುಣ್ಯಕ್ಷೇತ್ರವು ಇದರಷ್ಟು ಜನಪ್ರಿಯವಾಗಿಲ್ಲವೆಂದರೆ ತಪ್ಪಾಗಲಾರದು. ಪ್ರೊ॥ ಎಸ್.ಕೆ. ರಾಮಚಂದ್ರ ರಾಯರ 'ತಿರುಪತಿ ತಿಮ್ಮಪ್ಪ' ಎನ್ನುವ ಪುಸ್ತಕವು ಈ ಕ್ಷೇತ್ರದ ಮಹಾನ್ ಇತಿಹಾಸ ಪರಂಪರೆಯನ್ನು ಬಹಳ ಚನ್ನಾಗಿ ವಿವರಿಸುತ್ತದೆ.

ಈ ದಿವ್ಯದೇಶವು ಮೇಲಿನ ತಿರುಪತಿ, ಕೆಳ ತಿರು ಪತಿ ಎಂಬ ಎರಡು ಭಾಗಗಳನ್ನು ಹೊಂದಿದೆ. ಮೇಲಿನ ತಿರುಪತಿಯನ್ನು ತಿರುಮಲೆ ಎಂದೂ, ಕೆಳ ತಿರುಪತಿಯನ್ನು ತಿರುಪತಿ ಅಥವಾ ಗೋವಿಂದರಾಜ ಪಟ್ಟಣವೆಂದೂ ಕರೆಯುತ್ತಾರೆ. ದಕ್ಷಿಣ ಭಾರತದ ಪ್ರತಿಯೊಂದು ಪ್ರಮುಖ ನಗರದಿಂದಲೂ ಈ ಕ್ಷೇತ್ರಕ್ಕೆ ವಾಹನ ಸೌಕರ್ಯವಿದೆ. ಬಡವರಿಂದ ಕೋಟ್ಯಾಧೀಶ್ವರರವರೆಗೂ ಪ್ರತಿಯೊಬ್ಬ ಭಕ್ತನೂ ಇಲ್ಲಿಗೆ ಬರಲು ಅನುಕೂಲವಿರುವುದೇ ಅಲ್ಲದೆ ವೆಂಕಟಾಚಲಪತಿಯನ್ನು ದರ್ಶಿಸುವ ಅನುಕೂಲ ವಿದೆ.

ಹಿಂದೆ ಕೆಳ ತಿರುಪತಿಯಿಂದ ನಡೆದು ಹೋಗಲು ಅನುಕೂಲವಿತ್ತು. ಇಂದೂ ಮೆಟ್ಟಿಲೇರಿ ತಿರುಮಲೆ ಯನ್ನು ಸೇರುವರು ಅನೇಕರಿದ್ದಾರೆ.

ಈ ಶ್ರೀಕ್ಷೇತ್ರವನ್ನು ಆಳ್ವಾರರುಗಳೇ ಅಲ್ಲದೆ ಪ್ರಮುಖ ಶ್ರೀವೈಷ್ಣವ ಆಚಾರ್ಯರುಗಳು ಸೇವಿ ಸಿದ್ದಾರೆ. ಪಲ್ಲವ, ಚೋಳ, ವಿಜಯನಗರ ಅರ ಸರುಗಳು ಈ ದೇವಾಲಯಕ್ಕೆ ಕೊಡುಗೈ ದಾನ ಮಾಡಿದ್ದಾರೆ.

ತಿರುಮಲೆಯು ಪ್ರಾಚೀನ ಕಾಲದಿಂದಲೂ ಖ್ಯಾತವಾದುದು. ತಿರುಪತಿ ಮಾತ್ರ ಇತ್ತೀಚಿನ ಶತಮಾನಗಳಲ್ಲಿ ಸ್ಥಾಪಿತವಾಗಿ ವೃದ್ಧಿಗೊಂಡಿದೆ.

ತಿರುಮಲೆಗೆ ತಿರುವೇಂಗಡ, ವಡಮಲೈ, ವೆಂಕ ಟಾಚಲ ಎಂಬ ಅನೇಕ ಹೆಸರುಗಳಿವೆ. ಈ ಪರ್ವತ ಶ್ರೇಣಿಯು ಆದಿಶೇಷನ ಏಳು ಹೆಡೆಗಳೆಂಬುದು ಭಕ್ತರ ನಂಬಿಕೆ. ಇಲ್ಲಿನ ದೇವರನ್ನು ಶ್ರೀನಿವಾಸ, ವೆಂಕಟೇಶ, ಬಾಲಾಜಿ, ಸಪ್ತಗಿರಿದೇವ ಎಂಬ ಹೆಸರುಗಳಿಂದ ಕರೆಯುತ್ತಾರೆ. ಇಲ್ಲಿನ ಮೂಲ ವಿಗ್ರಹ ಶಿವ ಮತ್ತು ವಿಷ್ಣು–ಇವರಿಬ್ಬರ ಪ್ರತೀಕ ವಾಗಿದೆ. ಆದರಿಂದಲೇ ಇದು ಶೈವ, ವೈಷ್ಣವ– ಇಬ್ಬರನ್ನೂ ಆಕರ್ಷಿಸುತ್ತಿದೆ. ಜಗತ್ತಿನಲ್ಲಿ ಆಯ ಸ್ಕಾಂತ ಶಿಲೆಯಿಂದ ನಿರ್ಮಿತವಾದ ಏಕ ಮಾತ್ರ ವಿಗ್ರಹವಾದ ಇಲ್ಲಿನ ಮೂಲವರ ಮೂರ್ತಿಯನ್ನು ಒಮ್ಮೆ ದರ್ಶಿಸಿದರೆ ಮತ್ತೆ ಮತ್ತೆ ದರ್ಶಿಸಬೇಕೆ ನ್ನುವ ಆಸೆ ಹುಟ್ಟುವುದು ಸ್ವಾಭಾವಿಕ. ಇಲ್ಲಿನ ಸ್ವಾಮಿ ಪುಷ್ಕರಣಿ, ವರಾಹ ಸನ್ನಿಧಿ, ಬೆಟ್ಟದ ಮೇಲಿನ ಪಾಪನಾಶಿನಿ, ತುಂಬುರು ತೀರ್ಥ– ಇತ್ಯಾದಿ ಅನೇಕ ತೀರ್ಥಗಳನ್ನು ದರ್ಶಿಸುವುದು ಅವಶ್ಯಕ.

ತಿರುಪತಿಯಲ್ಲಿ ಬೃಹದಾಕಾರದ ಗೋವಿಂದ ರಾಜ ದೇವಾಲಯವಿದೆ. ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಕೋದಂಡರಾಮ ದೇವಾಲಯ, ಕಪಿ ಲೇಶ್ವರ ದೇವಾಲಯ, ಹರೇರಾಮ ಹರೇಕೃಷ್ಣ ದೇವಾಲಯಗಳನ್ನು ದರ್ಶಿಸುವುದು ಅವಶ್ಯಕ.

ಈ ಎರಡೂ ಕಡೆಗಳಲ್ಲಿ ತಿ. ತಿ. ದೇವಾಲಯದ ವರ ಛತ್ರಗಳು, ವಸತಿಗೃಹಗಳೂ ಇವೆ. ವಸತಿ ಗಾಗಿ ಬೇರೆ ಅನುಕೂಲಗಳೂ, ಊಟಕ್ಕೆ ಹೋಟೆಲುಗಳೂ ಇವೆ.

ತಿರುಪತಿಯಿಂದ ಎರಡು ಮೈಲಿ ದೂರದಲ್ಲಿನ ತಿರುಚಾನೂರು (ಪದ್ಮಾವತಿನಗರ) ನಲ್ಲಿ ಅಲ ರ್ಮೇಲ್ ಮಂಗೈ (ಪದ್ಮಾವತಿ) ದೇವಾಲಯ ಮತ್ತು ಬಳಿಯಲ್ಲಿ ಇರುವ ಪದ್ಮ ಸರೋವರ,



'ರಘುಸುತ'

ನಾರಾಯಣವನದಲ್ಲಿನ ಕಲ್ಯಾಣ ವೆಂಕಟೇಶ್ವರ ದೇವಾಲಯ, ನಾಗಲಾಪುರದ ವೇದ ನಾರಾಯಣ ಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರದ ವೆಂಕಟೇಶ್ವರ ದೇವಾಲಯಗಳನ್ನೂ ಭಕ್ತರು ದರ್ಶಿಸುತ್ತಾರೆ.

ತಿರುಮಲೆಯ ವೆಂಕಟೇಶ್ವರಪ್ಪೆರುಮಾಳ್‌ನನ್ನು ಮಧುರ ಕವಿಯಾಳ್ವಾರ್‌ರವರ ವಿನಹ ಮಿಕ್ಕೆಲ್ಲ ಆಳ್ವಾರುಗಳೂ ತುಂಬ ಭಕ್ತಿಯಿಂದ ಹಾಡಿ ಹೊಗಳಿದ್ದಾರೆ. ಅಲ್ಲದೆ ಅನೇಕ ಹಿಂದಿನ ಇಂದಿನ ಕವಿಗಳೂ ಆತನಲ್ಲಿ ಆತ್ಮನಿವೇದನೆ ಮಾಡಿಕೊಂಡು ಕೀರ್ತನೆಗಳನ್ನು ಹಾಡಿದ್ದಾರೆ.

ತಿರುಪತಿಯು ಇಂದು ಭಾರತದ ಒಂದು ಸಾಂಸ್ಕೃತಿಕ ಕೇಂದ್ರವಾಗಿದೆ: ಇಲ್ಲಿನ ವಿಶ್ವವಿದ್ಯಾನಿಲಯವು ಶಿಕ್ಷಣ ಪ್ರಸಾರದಲ್ಲಿ ಮಹತ್ತರ ಸಾಧನೆಯನ್ನು ಮಾಡಿದೆ. ವೇದ, ನಾಲಾಯಿರ ದಿವ್ಯ ಪ್ರಬಂಧಗಳ ಜನ ಪ್ರಿಯತೆಗೆ ಅನೇಕ ಯೋಜನೆಗಳನ್ನು ರೂಪಿಸಲಾಗಿದೆ. ಅಮೆರಿಕಾ, ಆಸ್ಟ್ರೇಲಿಯಾ ಯೂರೋಪ್ ಖಂಡಗಳಲ್ಲಿ ವೆಂಕಟೇಶ್ವರ ಸ್ವಾಮಿಯ ದೇವಾಲಯಗಳಲ್ಲಿ ನಿರ್ಮಾಣದಲ್ಲಿ ತಿ. ತಿ. ದೇವಾಲಯ ಸಮಿತಿಯ ಸ್ಥಾನ ಮಹತ್ತರವಾದುದು.

## ಅಹೋಬಿಲ

ಆಂಧ್ರ ಪ್ರದೇಶದ ತಿರುಪತಿಯ ನಂತರದಲ್ಲಿ ಅಹೋಬಿಲಂ ಬಹಳ ಮುಖ್ಯವಾದ ವಿಷ್ಣು ಕ್ಷೇತ್ರವಾಗಿದೆ. ಇದನ್ನು 'ನರಸಿಂಹಕ್ಷೇತ್ರ' ವೆಂದೂ ಕರೆಯುತ್ತಾರೆ. ಆದರೆ ಆಳ್ವಾರುಗಳು ಇದನ್ನು 'ಶಿಂಗವೇಳ್ ಕುಂಡ್ರಂ' ಎಂದು ಕರೆಸಿದ್ದಾರೆ. ಇಂತಹ ಆಧುನಿಕ ವಾಹನ ಸಂಚಾರ ಸೌಕರ್ಯವಿರುವ ಕಾಲದಲ್ಲೂ ಕೂಡ ಈ ಕ್ಷೇತ್ರವನ್ನು ತಲುಪುವುದು ಬಹಳ ಕಷ್ಟಕರವಾದ ವಿಷಯ. ಹಿಂದಿನ ಕಾಲದಲ್ಲಿ ತೀರ್ಥ ಕ್ಷೇತ್ರಗಳನ್ನು ಹೀಗೆ ಸಂದರ್ಶಿಸ ಬೇಕಾಗಿತ್ತೋ ಈಗಲೂ ಹಾಗೆಯೇ ದರ್ಶನ ಬೇಕಾಗಿದೆ.

ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿರುವ ಒಂದು ಸಣ್ಣ ಹಳ್ಳಿ ಅಹೋಬಿಲ. ಕಡಪ, ನಂದ್ಯಾಲಗಳಿಂದ ಆಳ್ಳಗಡ್ಡ ಎಂಬ ಊರಿಗೆ ಬಸ್ ಮುಖಾಂತರ ಹೋಗಬೇಕು. ಇಲ್ಲಿಂದ 12 ಮೈಲಿ ದೂರದಲ್ಲಿರುವ ಅಹೋಬಿಲಕ್ಕೆ ಎತ್ತಿನ ಗಾಡಿಯಲ್ಲಿ ಹೋಗಬೇಕು. ಬಸ್ ಸರಚಾರವಿಲ್ಲ: ಬ್ರಹ್ಮೋತ್ಸವದ ಕಾಲದಲ್ಲಿ ಮಾತ್ರ ಬಸ್ ಸಂಚಾರ ಇರುತ್ತದೆ. ಉಳಿದ ಕಾಲಗಳಲ್ಲಿ ಗಾಡಿಯೇ.

(25ನೇ ಪುಟ ನೋಡಿ)

# ಶ್ರೀ ವೆಂಕಟೇಶ್ವರ ಭಕ್ತಿ ಸಾರ

ಪಂಕಜಾಸನ ಜನಕ ತಿರುಪತಿ
ವೇಂಕಟೇಶಅನಂತ ಮಹಿಮನೆ
ಶಂಖ ಚಕ್ರ ಗದಾಧರಾಂಕಿತ ನಿನ್ನ ಕಿಂಕರನ ।
ಅಂಕುಡೊಂಕನು ತಿದ್ದಿ ಭೋಂಕನೆ ।
ಬಿಂಕವೆಲ್ಲವ ಮುರಿದು ಪಾಪದ ।
ಪಂಕದಿಂದುದ್ಧರಿಸಿ ವೇಂಕಟ ರಕ್ಷಿಸನವರತ ॥ –1–

ಅಸ್ವತಂತ್ರನು ನಾನು ನೀ ಸ ।
ರ್ವಸ್ವತಂತ್ರನು ಬಲ್ಲೆನೈ ಈ ।
ನಶ್ವರದ ದೇಹವಿದು ಶಾಶ್ವತವಲ್ಲ ವಿಶ್ವದಲಿ ।
ಹ್ರಸ್ವಮತಿ ಮಾನವನು ನಾ ಸ ।
ರ್ವಸ್ವ ನಿನ್ನಾಧೀನವಲ್ಲವೆ ।
ಸ್ವಸ್ವರೂಪವನರುಹಿ ವೇಂಕಟ ರಕ್ಷಿಸನವರತ ॥ –2–

ಕಾಲನಾಮಕ ಹರಿಯೆ ವಿಶ್ವದ ।
ಮೂಲೆ ಮೂಲೆಯೊಳಡಗಿ ಕೊಂಡ ವಿ ।
ಶಾಲಮಹಿಮನೆ ಪ್ರಳಯ ಜಲಧಿಯೊಳಾಲದೆಲೆ ಮೇಲೆ ॥
ಬಾಲಕನ ತೆರ ಮಲಗಿ ಕೊಂಡೆಡ ।
ಗಾಲಿನಂಗುಲಿ ಬಾಯೊಳಿಟ್ಟು ಸು ।
ಲೀಲೆ ಲೋಕಕೆ ತೋರ್ದ ವೇಂಕಟ ರಕ್ಷಿಸನವರತ ॥ –3–

ಕಡಲನಡು ಆ ಶೇಷ ರಾಜನ ।
ಹೆಡೆಯ ಕೊಡೆಯಾಶ್ರಯದಿ ಮಡದಿಯು ।
ತೊಡೆಯು ಮೇಲ್ಪವಡಿಸಿದ ಪ್ರಾಕೃತ ಪುರುಷ ನಿನ್ನಡಿಗೆ ॥
ಬಿಡದೆ ಸದೃಢ ಭಕ್ತಿಯಲಿ ಪೊಡ ।
ಮಡುವೆ, ಹುಡುಗನ ನುಡಿಗೆ ಕಂಬದ ।
ನೊಡೆದು ಬಂದ ಬಲಾಢ್ಯ ವೇಂಕಟ ರಕ್ಷಿಸನವರತ ॥ –4–

ಎಷ್ಟೊ ಭಕ್ತರು ಸಲಿಗೆಯಿಂದಲ ।
ದೆಷ್ಟೊ ನಿಷ್ಠುರ ನುಡಿಗಳಾಡಿರೆ ।
ಸಿಟ್ಟುಗೊಳ್ಳದೆ ನಗುತಲಿಷ್ಟಾರ್ಥಗಳ ಕೊಟ್ಟವರ ॥
ಕಷ್ಟ–ಕಾರ್ಪಣ್ಯಗಳ ಕಳೆವ ವಿ ।
ಶಿಷ್ಟ ಗುಣಮಟ್ಟವನು ಪಡೆದವ ।
ಶಿಷ್ಟರೊಂದಿತ ಪಾದ ವೇಂಕಟ ರಕ್ಷಿಸನವರತ ॥ –5–

ರಮ್ಮೆ ನಿನ್ನಯ ಧರ್ಮಪತ್ನಿಯು ।
ಬೊಮ್ಮ ಹೆಮ್ಮಗ, ರುದ್ರ ಮೊಮ್ಮಗ ।
ಹೆಮ್ಮಗಳು ಜಾಹ್ನವಿಯು ಸುಮನಸರೆಲ್ಲ ಬಾಂಧವರು ।
ಈಮ್ಮಹೇಶಾದ್ಯಮರರೆಲ್ಲರು
ಸುಮ್ಮನೇ ಸೇವಿಸುತಲಿರ್ದರು ।
ಧರ್ಮರಾಜನಿಗೊಲಿದ ವೇಂಕಟ ರಕ್ಷಿಸನವರತ ॥ –6–

ಸಹನೆಯಲಿ ನಿನ್ನಂಥ ದೇವರು ।
ಮಹಿಯೊಳಿನ್ನಾರುಂಟು ? ಮೋಹದ ।
ಮಹಿಳೆ ಮಹಲಕ್ಷ್ಮಿಯನು ಸಹ ಲೆಕ್ಕಿಸದೆ ಅವಮಾನದಿ ॥
ದ್ರುಹಿಣ ಜಾಹ್ನವಿಯರನು ಹೆತ್ತವ ।
ಗಹನ ಮಹಿಮ ವಿಹಂಗ ವಾಹನ ।
ಗುಹನ ಪ್ರಪಿತಾಮಹನೆ ವೇಂಕಟ ರಕ್ಷಿಸನವರತ ॥ –7–

ನಾರದನ ತೆರ ನಿನ್ನ ಸರ್ವದ ।
ಸಾರ ಗಾಯನ ಮಾಡಲರಿಯೆನು ।
ಮಾರುತಿಯ ಪರಿ ನಿನ್ನನಾರಾಧಿಸೆನು ನಿತ್ಯದಲಿ ॥
ಪೋರ ಆ ಧ್ರುವ ರಾಜನಂದದಿ ।
ಘೋರ ತಪದಿಂದೊಲಿಸಲಾರೆನು ।
ಮಾರ ಜನಕನೆನಗೊಲಿದು ವೇಂಕಟ ರಕ್ಷಿಸನವರತ ॥ –8–

ನಂಬಿ ಕೆಟ್ಟವರಿಲ್ಲ ನಿನ್ನನು ।
ನಂಬಲಾರದ ಕೆಟ್ಟಿಹರು ಬಲು ।
ಡಂಬ ರಾವಣ ಕೆಟ್ಟ ನಂಬದೆ, ವರ ವಿಭೀಷಣನು ॥
ತುಂಬ ನಂಬಿಹನೆಂಬ ಕಾರಣ ।
ಕುಂಭಿಣಿಯ ಪಾಲಿಸಿದ ಭಕ್ತರ ।
ತುಂಬು ಹೃದಯದಿ ಪೊರೆವ ವೇಂಕಟ ರಕ್ಷಿಸನವರತ ॥ –9–

ಪುಟ್ಟ ಪ್ರಹ್ಲಾದನಿಗೆ ದರ್ಶನ ।
ಕೊಟ್ಟು ಸಲಹಿದೆ. ದಿಟ್ಟ ಧ್ರುವನಿಗೆ ।
ಪಟ್ಟಗಟ್ಟಿದೆ, ಮುಷ್ಟಿ ಅವಲಿಯ ತಂದ ಬ್ರಾಹ್ಮಣಗೆ ॥
ಕೊಟ್ಟೆ ನೀ ಬಹಳಷ್ಟು ಸಂಪದ ।
ನಷ್ಟ ಕರಣಾಕರನೊ ದುರಿತ ಘ ।
ರಟ್ಟನೆಂದೆರಗುವೆನು ವೇಂಕಟ ರಕ್ಷಿಸನವರತ ॥ –10–

ಶ್ರೀ ಕೆ. ರಾಮಾಚಾರ್ಯ

# ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ'ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ಯಾತ್ರಿಕರಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ.
* ಒಂದು ಕುಟುಂಬದ ಐದು ಮಂದಿ ಅಥವಾ ಎರಡು ಸಂಸ್ಥೆಗಳೂ ಸೇರಿ ದತ್ತಿಯ ಹಣವನ್ನು ನೀಡಬಹುದು.
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |
| 6. | ಶ್ರೀ ಬಿ. ಎಂ. ಖೈತಾನ್, ಕಲ್ಕತ್ತ | ರೂ 10 ಲಕ್ಷ |
| 7. | ಶ್ರೀ ಛಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ | ರೂ 10 ಲಕ್ಷ |
| 8. | ಶ್ರೀ ರಾಮನಾಥಗೋಯಂಕಾ, ಮದರಾಸು. | ರೂ 10 ಲಕ್ಷ |
| 9. | ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್, ಕಲ್ಕತ್ತ | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**

# ಗೀತೆಯ ಸಾರ

ವೃಷ್ಣಿ ವಂಶೋದ್ಭವನೂ, ಲೋಕಗುರುವೂ ಆದ ಶ್ರೀ ಕೃಷ್ಣನು– ಮಧ್ಯಮಪಾಂಡವನಾದ ಪಾರ್ಥನನ್ನು ನಿಮಿತ್ತ ಮಾಡಿಕೊಂಡು ಬೋಧಿಸಿದ –ತತ್ತ್ವಾಮೃತವೇ "ಗೀತೆ". ಗೀತೆಯು – ಶ್ರೀ ಕೃಷ್ಣಾರ್ಜುನರ ಸಂವಾದ ರೂಪವಾಗಿದ್ದು, ಮಾನವೀಯ ಜೀವನದ ಪ್ರತಿಯೊಂದು ಹಂತಗಳನ್ನು, ಸ್ತರಗಳನ್ನು ವಿವರಿಸುತ್ತ, 'ಸಮಗ್ರ ಜೀವನ ದರ್ಶನಕ್ಕೆ' ಬೇಕಾದ ವೈಚಾರಿಕತೆಯ ಮಹಾಪೂರವನ್ನೇ ಹರಿಸಿದೆ.

ಶ್ರೀಕೃಷ್ಣನು ಇಲ್ಲಿ, ಜೀವನದ ಮಹೋನ್ನತ ಮೌಲ್ಯಗಳನ್ನು ಎತ್ತಿಹಿಡಿದು, ಅದರ ಮಹತ್ತ್ವವನ್ನು ವರ್ಣಿಸುವ ರೀತಿ ಅತ್ಯಂತ ಸರಳ ಹಾಗೂ ಸುಲಭವಾಗಿದೆ. ಶ್ರೀಕೃಷ್ಣನಿಗೇನೋ ಹೇಳುವುದು ಕಷ್ಟವಾಗಲಿಲ್ಲ. ಆದರೆ ನಮಗೆ? ಹಾಗೆಂದು ನಾವು ಉದಾಸೀನರಾದರೆ 'ಗೀತೆಯ ಮಹತ್ತ್ವ, ಜೀವನದ ಮಹತ್ತ್ವ' ಅರಿವಾಗುವುದಿಲ್ಲ. ಪಾರ್ಥನ– "ಶಿಷ್ಯಸ್ತೇಹಂ ಶಾಧಿ ಮಾಂ ತ್ವಾಂ ಪ್ರಪನ್ನಂ" ಎಂದು ಶ್ರೀಕೃಷ್ಣನಲ್ಲಿ ಮೊರೆಯಿಟ್ಟು, ಬೇಡಿದಂತೆ, ನಾವು ಗೀತಾಮಾತೆಯನ್ನು ಮೊರೆಹೋಗೋಣ. "ಗೀತೆಯು ಜೀವನದ ಸಂಗಾತಿ. ಜೀವನಸಾರವೇ ಆಗಿದೆ ಎಂದರೂ ಅತಿಶಯೋಕ್ತಿಯಲ್ಲ." ಈಗ ವಿಮರ್ಶೆಯನ್ನು ನೋಡೋಣವೇ?

## ಗೀತೆಯ ಉಗಮ ಯಾವಾಗ?

ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ, ಪಾಂಡವರು ಮತ್ತು ಕೌರವರು ಪರಸ್ಪರ ಕಾದಾಡಿ ಗೆಲ್ಲಬೇಕೆಂಬ ತವಕದಿಂದ – ಶಸ್ತ್ರ ಸಜ್ಜಿತರಾಗಿ–ಸಜ್ಜುಗೊಂಡು, ತಮ್ಮ ತಮ್ಮ ಸೈನ್ಯಸಹಿತರಾಗಿ ಯುದ್ಧಕ್ಕೆ ಆರಂಭಿಸಬೇಕೆಂದಿರುವಾಗ – ಎರಡೂ ಸೈನ್ಯಗಳ ಮಧ್ಯೆ ನಿಂತ ಪಾರ್ಥನು, ತನ್ನ ಎದುರಿನಲ್ಲಿರುವ – ತಮ್ಮೊಂದಿಗೆ ಕಾದಾಡಲು ಸಿದ್ಧರಾಗಿ ನಿಂತಿರುವ – ಭೀಷ್ಮರು – ಕೃಪಾಚಾರ್ಯರು – ದ್ರೋಣರು, ಶಲ್ಯ, ಕರ್ಣ, ಅಶ್ವತ್ಥಾಮಾದಿಗಳನ್ನು ಕಂಡು, ತನ್ನವರೆಂಬ ಬಂಧುಮೋಹಕ್ಕೊಳಗಾಗಿ, ಸ್ವಜನ ಭ್ರಾಂತಿಯಿಂದ ಕಾಂತಿಹೀನನಾಗಿ, ಭಯಗೊಂಡು, ಖಿನ್ನನಾಗಿ – ಶಸ್ತ್ರ ಸನ್ಯಾಸಗೈದು ಶ್ರೀಕೃಷ್ಣನನ್ನು ಕುರಿತು ಹೀಗೆ ಭಿನ್ನವಿಸಿದ.

"ಕೃಷ್ಣಾ, ನನಗೆ ಯುದ್ಧ ಬೇಡ. ನಾನು ಯುದ್ಧ ಮಾಡುವುದಿಲ್ಲ. ಏಕೆಂದರೆ– ನಾನು ಇಲ್ಲಿ ನನ್ನವರನ್ನು ಕೊಲ್ಲಬೇಕಾಗಿದೆ. ಇದು ಧರ್ಮಯುದ್ಧವಲ್ಲ. ಅಧರ್ಮಯುದ್ಧ. ನಮ್ಮಂತಹವರಿಗೆ ಇದು ಧರ್ಮವಲ್ಲ. ನಾನು ಯಾವ ರಾಜ್ಯವನ್ನು, ಕೋಶವನ್ನು, ಸುಖವನ್ನು, ರಾಜಪದವಿಯನ್ನು ಬಯಸುವುದಿಲ್ಲ. "ತಿರಿದು ತಿಂದಾದರೂ ಜೀವಿಸಿಯೇನು", ಕೃಷ್ಣಾ ನನಗೆ ಈ ಯುದ್ಧ ಬೇಡ. ಕೌರವರೇ ರಾಜ್ಯವಾಳಿಕೊಂಡಿರಲಿ, ನಾನು ಬೇಡವೆನ್ನುವುದಿಲ್ಲ. ನನಗೆ ರಾಜ್ಯಪದವಿಯ ಮೇಲೆ ಕಾಂಕ್ಷೆ ಇಲ್ಲ. ನಾನು ಕಾಣಬಾರದ ವಿಪರೀತಗಳನ್ನು ಕಾಣುತ್ತಿದ್ದೇನೆ. ನನ್ನ ಶರೀರ ಕಂಪಿಸುತ್ತಿದೆ. ನನ್ನನ್ನು ಈ ಯುದ್ಧಕ್ಕೆ ನಿಯೋಜಿಸಬೇಡ ಕೃಷ್ಣಾ. ನನಗೆ ಯುದ್ಧಗೈಯಲು ಮನಸ್ಸು ಬರುತ್ತಿಲ್ಲ.

"ವಾಸುದೇವಾ, ಧಾರ್ತರಾಷ್ಟ್ರರು ನನ್ನನ್ನು ಕೊಂದುಬಿಟ್ಟರೆ ಅದೇ ನನಗೆ ಕ್ಷೇಮ, ಸೌಖ್ಯ".

ಅತ್ತು – ಗೋಳಾಡಿ, ಪಾರ್ಥ ಶ್ರೀಕೃಷ್ಣನ ಮುಂದೆ ಮಂಡಿಯೂರಿ ಕುಳಿತು ಅತ್ಯಂತ ವಿಷಾದದಿಂದ ಅವನ ಮುಖವನ್ನೇ ನೋಡುತ್ತಾ ಕುಳಿತಿರುವಾಗ–ಶ್ರೀಕೃಷ್ಣನು ಮುಗುಳುನಕ್ಕು – ಮಧ್ಯಮ ಪಾಂಡವನನ್ನು ಕುರಿತು ಹೇಳುತ್ತಾನೆ. "ಪಾರ್ಥಾ, ನೀನು ಆರ್ಯ ಎನ್ನುವುದನ್ನು ಮರೆಯಬೇಡ. ವೀರ ಕ್ಷತ್ರಿಯನಾಗಿ, ಪ್ರಸಿದ್ಧ ವಂಶದಲ್ಲಿ ಹುಟ್ಟಿ, ಅನಾರ್ಯವೂ, ಸ್ವರ್ಗದ ಹಾದಿಯನ್ನು ತಪ್ಪಿಸುವಂತಹುದೂ ಆದ ಅಸಂಸ್ಕೃತವಾದ ಮಾತುಗಳನ್ನು ಆಡಿ ನಿನ್ನ ನಾಲಿಗೆಯನ್ನು ಏಕೆ ಹೊಲಸು ಮಾಡಿಕೊಳ್ಳುತ್ತೀಯೆ? ನಿನ್ನಂತಹವನಿಗೆ ಈ ವಿಷಮತೆ ಎಲ್ಲಿಂದ ಬಂತು?

"ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ?"– "ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವಾ ಉತ್ತಿಷ್ಠ ಪರಂತಪ" – ಅತ್ಯಂತ ಕ್ಷುದ್ರತಮವಾದ, ಮನಸ್ಸಿನ – ಹೃದಯದ ದೌರ್ಬಲ್ಯವನ್ನು ತೊರೆದು ಗಾಂಡೀವವನ್ನು ಹಿಡಿದು ಕೆಚ್ಚೆದೆಯಿಂದ ಕಾದಾಡು. ಸಾಕು ನನ್ನವರೆಂಬ ಭ್ರಾಂತಿಯನ್ನು ಬಿಡು. ಸ್ವಲ್ಪ ಕಣ್ತೆರೆದು ನೋಡು ಪಾರ್ಥಾ. ಎದುರಾಳಿಗಳಾದ ಧಾರ್ತರಾಷ್ಟ್ರರು ನನ್ನನ್ನು ಕೊಂದರೆ ಕ್ಷೇಮಕರವೆಂದೆ. ವಿಚಾರಿಸಿನೋಡು. ಕೊಲ್ಲುವುದಕ್ಕೆ ಅವರು ಯಾರು? ಕೊಲ್ಲಿಸಿಕೊಳ್ಳುವುದಕ್ಕೆ ನೀನುಯಾರು? ಭಾವಿಸಿನೋಡು ನೀನು ನಿಮಿತ್ತಮಾತ್ರ. ನೀನು ಹೇಡಿಯಲ್ಲ. ನಿನ್ನಲ್ಲಿ ಎಂತಹ ಶಕ್ತಿ ಅಡಗಿದೆ ಎನ್ನುವುದನ್ನು ನೀನು (ಅಂತಿಂತಲ್ಲ) ಮರೆತಿದ್ದೀಯೆ.

"ಸ್ವಜನಭ್ರಾಂತಿಯಿಂದ ಮೋಹಗೊಂಡು,– ದೀನನಾಗಿ ಕಂಗೆಟ್ಟು ಕರ್ತವ್ಯವನ್ನೇ ಮರೆತಿದ್ದೀಯೆ ಪಾರ್ಥಾ. ಯಾರು ಯಾರನ್ನು ಕೊಲ್ಲಬೇಕು? ಯಾರಿಗೆ ಯಾವುದು ಶಾಶ್ವತ? ಈ ಜೀವನ ಕ್ಷಣಿಕ. ಯಾರಿಗೂ ಶಾಶ್ವತವಲ್ಲ. ಹಾಗೆಂದು, ಕೇವಲ ಉದಾಸೀನನಾಗಿರಬೇಕೆಂದರೆ ಜೀವನವನ್ನು ಸಂಪೂರ್ಣ ತ್ಯಜಿಸುವುದು ಎಂದಾಗಲೀ, ತಿರಸ್ಕರಿಸುವುದು ಎಂದಾಗಲೀ ಅರ್ಥವಲ್ಲ. ದೇಹ ನಶ್ವರ. ಆತ್ಮ ಅಮರ."

ಹೇಡಿಗಳಂತೆ ಬದುಕುವುದು ವೀರರ ಲಕ್ಷಣವಲ್ಲ. ಈ ಭೌಗೋಳಿಕ ಜಗತ್ತಿಗೆ ಬಂದಿದ್ದೇವೆ. ಜೀವನ ಯಾರಿಗೂ ಅನಿವಾರ್ಯ. ಇಲ್ಲಿ ಬಂದವರು ಯಾರೂ ಜೀವನವನ್ನು ಎದುರಿಸದೇ ಇರಲು ಸಾಧ್ಯವಿಲ್ಲ. ಧೀರತೆಯಿಂದ ಹೋರಾಡಬೇಕು. ನೊಂದುತನದಿಂದ ಅಲ್ಲ. ಕೇವಲ ನಾನು ನನ್ನದು ನನ್ನವರೆಂಬ ಮೋಹಕ್ಕೆ ಬಲಿಯಾಗಿ ಬದುಕುವುದು ಜೀವಿಯ ಧರ್ಮವಲ್ಲ. ಕಾಮಾದಿ ದುಷ್ಟಜಾಲಕ್ಕೆ ಬಿದ್ದವರುಯಾರೂ ಮುಕ್ತರಾಗಿಲ್ಲ.

"ಪಾರ್ಥಾ, "ಗತನ್ನ ಶೋಚಯೇತ್ಪ್ರಾಜ್ಞಃ" ಪ್ರಾಜ್ಞರು, ಜ್ಞಾನಿಗಳು, ವಿಜ್ಞಾನಿಗಳು – ಬಂದದ್ದಕ್ಕೆ ಸಂತೋಷಿಸದೇ, ಹೋದದ್ದಕ್ಕೆ ದುಃಖಿಸದೆ– ದ್ವಂದ್ವವನ್ನೂ ಮೀರಿ ನಿಂತು ತಮ್ಮ, ತಮ್ಮ ಕರ್ತವ್ಯವನ್ನು ಮಾಡಿ ಮುಗಿಸುತ್ತಾರೆ. ಸುಖ–ದುಃಖ, ಶತ್ರು–ಮಿತ್ರ, ಶೀತ–ಉಷ್ಣ, ಮಾನ–ಅಪಮಾನಾದಿ ದ್ವಂದ್ವಗಳನ್ನು ಸಮಾನವಾಗಿ ಭಾವಿಸಿ ಸಿಹಿ–ಕಹಿಗಳನ್ನು ಉಂಡರೂ ಸ್ವಲ್ಪವೂ ವಿಚಲಿತನಾಗದೇ ತನ್ನತನಕ್ಕಾಗಿ ಸತ್ಯದಿಂದ, ಪ್ರಾಮಾಣಿಕತೆಯಿಂದ ಹೋರಾಡುವವನೇ ಧೀರ.

**ಸಂತ ಹರಿಹರಾನಂದ ಸರಸ್ವತೀ**

"ಪ್ರತಿಯೊಬ್ಬರಿಗೂ ತನ್ನ ತನ್ನ ಕರ್ತವ್ಯವೆನ್ನುವುದೊಂದಿದೆ. ಅಂತೆಯೇ ಪಾರ್ಥಾ, ನಿನಗೆ ಯುದ್ಧವು ಕರ್ತವ್ಯವಾಗಿದೆ. ಇದು ಅಧರ್ಮಯುದ್ಧವಲ್ಲ. ಧರ್ಮಯುದ್ಧ. ಕ್ಷತ್ರಿಯನಿಗೆ ಯುದ್ಧವು ಸಹಜಧರ್ಮ. ಅದೇ ಸ್ವಕರ್ಮವೂ ಹೌದು. ಕ್ಷತ್ರಿಯನ ಕರ್ತವ್ಯವೇನು ? ದುಷ್ಟಶಿಕ್ಷೆ–ಶಿಷ್ಟರಕ್ಷೆ –ಧರ್ಮಪರಿಪಾಲನೆ ಅಲ್ಲವೇ ?

"ಪಾರ್ಥಾ! ನಿನ್ನ ಮೇಲೆ ಬಹುದೊಡ್ಡ ಹಾಗೂ ಗುರುತರವಾದ ಜವಾಬ್ದಾರಿ ಇದೆ ಎನ್ನುವುದು ನೀನು ಮರೆಯಬೇಡ. ನಿನ್ನ ಬದುಕು ರಾಷ್ಟ್ರದ–ಸಮಸ್ತ ಸಾತ್ತ್ವಿಕ ಪ್ರಜೆಗಳ ರಕ್ಷಣೆಗಾಗಿ ಮೀಸಲಾಗಿದೆ. ಆ ಕರ್ತವ್ಯವನ್ನು ನೀನು ನಿರ್ವಹಿಸಲೇ ಬೇಕು. ಈಗ "ದೌರ್ಬಲ್ಯವು" ಅಂದರೆ ದುಷ್ಟಶಕ್ತಿಯು ಮಿತಿಮೀರಿ ಬೆಳೆದು ನಿಂತಿದೆ. ಲೋಕವೇ ಉಲ್ಲೋಲ ಕಲ್ಲೋಲ ಸ್ಥಿತಿಯಲ್ಲಿರುವಾಗ ನೀನೊಬ್ಬ ಕೇವಲ ಕ್ಷುಲ್ಲಕವಾದ ಬಂಧು ಮೋಹದ ಕಾರಣಕ್ಕಾಗಿ ಹಿಂಜರಿಯುತ್ತಿರುವೆಯಲ್ಲ. ಯುದ್ಧವನ್ನೇ ತ್ಯಜಿಸಲು ಸಂಕಲ್ಪಿಸಿರುವ ನಿನ್ನ ಮಾತುಗಳನ್ನು ಕೇಳಿ ನನಗೆ ನಗಬೇಕೋ, ಅಳಬೇಕೋ ತಿಳಿಯದಾಗಿದೆ.

"ಪಾರ್ಥ ನಿನಗಾಗಿಯಲ್ಲದಿದ್ದರೂ ಲೋಕಹಿತಕ್ಕಾಗಿಯಾದರೂ ನೀನು ಈ ಯುದ್ಧವನ್ನು ಮಾಡಲೇಬೇಕಾಗಿದೆ. ಮಾಡಬೇಕು. ಅದು ನಿನ್ನ ಕರ್ತವ್ಯವೂ ಹೌದು. "ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ" ಎನ್ನುತ್ತಾನೆ ಶ್ರೀಕೃಷ್ಣ.

"ಪಾರ್ಥಾ, ಲೋಕದೃಷ್ಟಿ ನಿನ್ನ ದೃಷ್ಟಿಯಾಗಬೇಕು. ನಿನ್ನ ಜೀವನ ಸಮಾಜಕ್ಕೆ–ಸಮಷ್ಟಿಗೆ ಮೀಸಲಾಗಬೇಕು. ಇದೇ ಜೀವನ ಯಜ್ಞ. ಇದರಲ್ಲಿ ಪ್ರತಿಯೊಬ್ಬರೂ ಭಾಗಿಗಳಾಗಬೇಕು. ತಮ್ಮ ತಮ್ಮ ಪಾಲಿನ ಕರ್ತವ್ಯವನ್ನು, ಕರ್ತವ್ಯದಿಂದ ವಿಮುಖರಾಗದೇ ನಿರ್ವಹಿಸಬೇಕು. ಇದು ದೇಹವಿರುವವರೆಗೂ, ಜೀವನವಿರುವವರೆಗೂ ಅನಿವಾರ್ಯ.

"ನಹಿ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್" ಕರ್ಮವನ್ನು ಮಾಡದೇ ಯಾವ ಜೀವಿಯೂ ಕ್ಷಣ ಮಾತ್ರವೂ ಸುಮ್ಮನಿರಲು, ನಿಷ್ಕ್ರಿಯನಾಗಲು ಸಾಧ್ಯವಿಲ್ಲ. ಇಲ್ಲಿ ಕರ್ಮತ್ಯಾಗವಲ್ಲ, ಕರ್ಮಫಲ ತ್ಯಾಗ ಮುಖ್ಯ. ಕರ್ಮವನ್ನು ತ್ಯಜಿಸುವುದು ಎಂದರೆ– ಮಾನವ ವ್ಯಕ್ತಿ ಬದುಕಿ ಸತ್ತಂತೆಯೇ. ಪಾರ್ಥ ಇದರಲ್ಲಿ ಸಂಶಯವಿಲ್ಲ. ವ್ಯಕ್ತಿ ಸದಾ ಕ್ರಿಯಾಶೀಲನಾಗಿ ತನ್ನ ಬುದ್ಧಿ ವೃತ್ತಿಯನ್ನು ಶುದ್ಧವಾಗಿರಿಸಿಕೊಂಡು, ಉತ್ತಮಚಾರಿತ್ರ್ಯವನ್ನು ಪಡೆದು ಲೋಕಕಲ್ಯಾಣಕ್ಕಾಗಿ ದುಡಿಯುವುದು – ಶ್ರೇಯಃಪ್ರಾಪ್ತಿಗೆ ಉತ್ತಮದಾರಿ.

"ಪಾರ್ಥ, ಜನಕ ಚಕ್ರವರ್ತಿಯೇ ಮೊದಲಾದವರೂ ಸಹ ಈ ಹಾದಿಯಲ್ಲಿ ಮುನ್ನಡೆದು ಜನ್ಮಸಾರ್ಥಕ್ಯವನ್ನು ಪಡೆದ ಮಹಾಪುರುಷರು". "ಅಸ್ಥಿತಾ ಜನಕಾದಯಃ" ಎನ್ನುತ್ತಾನೆ ಶ್ರೀಕೃಷ್ಣ.

"ಯದ್ಯದಾಚರತಿಶ್ರೇಷ್ಠಃ ತತ್ತದೇವೇತರೋ ಜನಃ। ಸಯತ್ಪ್ರಮಾಣಂ ಕುರುತೇ ಲೋಕಃ ತದನುವರ್ತತೇ" ಹಿರಿಯರು ಶ್ರೇಷ್ಠವೆಂದು ಯಾವುದನ್ನು ಪ್ರಮಾಣೀಕರಿಸಿ ಯಾವ ಮಾರ್ಗದಲ್ಲಿ ಮುನ್ನಡೆದಿದ್ದಾರೆಯೋ ಅದೇ ಹಾದಿಯಲ್ಲಿಯೇ (ಇತರರೂ) ಲೋಕದ ಜನರೂ ಹೋಗುತ್ತಾರೆ. "ಮಹಾಜನೋ ಏನಗತಸ್ಸ ಪಂಥಾ" ಹಿರಿಯರು ಹೋದ ದಾರಿಯಲ್ಲಿಯೇ ಕಿರಿಯರೂ ನಡೆಯುವುದು ಶ್ರೇಯಸ್ಕರ. ಪಾರ್ಥಾ, ನಿನ್ನ ವಂಶದ ಹಿರಿಯರನ್ನು, ಅವರ ಜೀವನದ ವಿಧಾನವನ್ನು ಅವರ ಧ್ಯೇಯ – ಧೋರಣೆಗಳನ್ನು ಅವರು ಬದುಕಿದ–ಬಾಳಿದ ಬಗೆಯನ್ನು ಸ್ಮರಿಸಿಕೋ. ನಿನ್ನದು ವೀರವಂಶ. ನೀನು ಹೇಡಿಯಲ್ಲ.

"ಹೀಗೆ ನೀನು ಅಳುಕುತ್ತ–ಅಂಜುತ್ತ, ಅಳುತ್ತ ಕುಳಿತು, ಯುದ್ಧವನ್ನು ಮಾಡದೆ ಹಿಂತಿರುಗಿದೆ ಎಂದರೆ ನಿನ್ನವರೇ ನಿನ್ನ ಬಗ್ಗೆ ಆಡಬಾರದ ಮಾತುಗಳನ್ನು ಆಡಿ ಬಹುಲಘುವಾಗಿ ನಿಂದಿಸುತ್ತಾರೆ. ಅರ್ಜುನ ವೀರನಲ್ಲ, ಹೇಡಿ. ಯುದ್ಧ ಮಾಡಲಾರದೇ ಬೆನ್ನು ತೋರಿಸಿ ಪಲಾಯನ ಸೂಕ್ತ ಹೇಳಿ ಓಡಿಹೋದ ಎಂದು ಆಡಿಕೊಳ್ಳುವುದಿಲ್ಲವೇ ? ಯೋಚಿಸು. ಪಾರ್ಥಾ ನಿನ್ನವರೆದುರು ನೀನೇ ಲಘುವಾಗುತ್ತೀಯೆ, ಹಗುರವಾಗುತ್ತೀಯೆ.

"ಸ್ವಧರ್ಮೇ ನಿಧನಂ ಶ್ರೇಯಃ"–ತನ್ನ ಧರ್ಮದಲ್ಲಿ ಸತ್ತರೆ ಅದು ಅತ್ಯಂತ ಶ್ರೇಯಸ್ಕರ.

'ಪರಧರ್ಮೋ ಭಯಾವಹಃ'–ಪರಧರ್ಮವು ಅಷ್ಟೇ ಭಯಾವಹವಾದುದು ಎಂದರೆ ಭಯಂಕರವಾದುದು. ಎಲೈ ಕೌಂತೇಯನೇ 'ನೀನು ಯುದ್ಧದಲ್ಲಿ ಸತ್ತರೆ ವೀರಸ್ವರ್ಗವನ್ನು ಪಡೆಯುತ್ತೀಯೆ. ಕೀರ್ತಿ ಬರುತ್ತದೆ. ಗೆದ್ದರೆ ಭೂಮಿಯನ್ನು ಅನುಭವಿಸುತ್ತೀಯೆ". ಯುದ್ಧವನ್ನು ತ್ಯಜಿಸಿ ಹಿಂತಿರುಗುವುದು ಯಾವತ್ತೂ ವೀರನ ಲಕ್ಷಣವಲ್ಲ.

"ಏಳು ಪಾರ್ಥಾ -ಗಾಂಡೀವವನ್ನು ಕೈಗೆತ್ತಿಕೋ. ಶತ್ರು ಸೈನ್ಯವನ್ನು ಸದೆಬಡಿದು–ಧರ್ಮಸಂಸ್ಥಾಪನಾ ಕಾರ್ಯದಲ್ಲಿ ಸಹಕರಿಸಿ ಕೀರ್ತಿಶಾಲಿಯಾಗು" ಎಂದು ಲೋಕಗುರುವು– ಪಾರ್ಥನ ಬೆನ್ನು ತಟ್ಟಿ, ಸಮಯೋಚಿತವಾದ ಮಾತುಗಳನ್ನು ಆಡಿ, ಅವನೊಳಗೆ ಸುಪ್ತವಾಗಿದ್ದ ಕಲಿತನವನ್ನು ಜಾಗೃತಗೊಳಿಸಿ, ಕಲಿಯಾದ ಅವನ ಸೂಕ್ಷ್ಮಶಕ್ತಿಯನ್ನು ಉದ್ದೀಪ
ಗೊಳಿಸಿ, ಗಾಂಡೀವವನ್ನು ಅವನ ಕೈಯಲ್ಲಿ ಹಿಡಿ
ಯುದ್ಧಕ್ಕೆ, ಧರ್ಮರಕ್ಷಣೆಗೆ ಪ್ರಚೋದಿಸಿದ್ದಾ
ಶ್ರೀಕೃಷ್ಣ.

ಇಲ್ಲಿ ಶ್ರೀಕೃಷ್ಣಪರಮಾತ್ಮನು– ಪಾರ್ಥ
ಮೂಲಕ ಸಮಸ್ತ ಮಾನವಕೋಟಿಗೆ ಕರ್ತವ್ಯ
ಕಲಿಸಿಕೊಟ್ಟಿದ್ದಾನೆ. ಕರ್ತವ್ಯ ಸತ್ತರೆ ಮನುಷ
ಸತ್ತಂತೆಯೇ – ಎನ್ನುವ ಅಂಶ ಇಲ್ಲಿ ವ್ಯ
ವಾಗುತ್ತಿದೆ.

ಹೀಗೆ ಪಾರ್ಥನು ಕಿಂಕರ್ತವ್ಯಮೂಢನಾ
ಸರಿಯಾದ ದಾರಿ ಕಾಣದೇ, ಕಂಗೆಟ್ಟು ಪರಿತ
ಸುತ್ತಿರುವಾಗ ಸಮಸ್ಯೆಯ ಸುಳಿಯಲ್ಲಿ ಸಿಲುಕಿ
ವಾಗ ಸಮರಾಂಗಣದಲ್ಲಿ ಎರಡೂ ಸೈನ್ಯಗ
ನಡುವೆ ನಿಂತ ಪಾಂಡವಮಧ್ಯಮನ ತಾಕಲಾಟ
ಮಧ್ಯೆ "ಗೀತೆಯು" ಉಗಮವಾಯ್ತು. ನಿಜವಾ
ಉಜ್ವಲವಾದ (ಸಂದೇಶ) ಬೋಧೆ ಆರಂ
ವಾಯ್ತು.

ಇಲ್ಲಿ ಪಾರ್ಥನನ್ನು ಕುರಿತು ಶ್ರೀಕೃಷ್ಣನು
"ನಿಮಿತ್ತಮಾತ್ರಂ ಭವ ಸವ್ಯಸಾಚಿ
ಎನ್ನುತ್ತಾನೆ. ನೀನು ನಿಮಿತ್ತಮಾತ್ರ ಎನ್ನುತ್ತಾ
ಅವನಲ್ಲಿ ಕರ್ತವ್ಯ ಪ್ರಜ್ಞೆಯನ್ನು ಮೂಡಿಸಿದ್ದಾನೆ
ನಿಮಿತ್ತವಾಗಿದ್ದಾನೆ ಪಾರ್ಥ, ಎಂದರೆ ಅವನಿ
ಸಮಸ್ಯೆಗಳಿರಲಿಲ್ಲವೆಂದಲ್ಲ. ಅವನು ಹೇಡಿಯಲ್ಲ
ಯುದ್ಧವನ್ನು ಕಂಡರಿಯದವನಲ್ಲ. ಇದ
ಮೊದಲು ಎಷ್ಟೋ ಯುದ್ಧವನ್ನು ಮಾಡಿದ್ದಾನೆ
ಗೆದ್ದಿದ್ದಾನೆ. ಸಂತಸ ಪಟ್ಟಿದ್ದಾನೆ. ಆದರೆ ಈಗ
ಪಾರ್ಥನ ಸ್ಥಿತಿಯೇ ಬೇರೆ. ಅವನ ಮನಃಸ್ಥಿ
ಎಂದಿನಂತಿಲ್ಲ. ಆದ್ದರಿಂದ ಶ್ರೀಕೃಷ್ಣನ ಮುಂ
ಕಂಗಾಲಾಗಿ ನಿಂತಿದ್ದಾನೆ. ಈಗೊಂದು ಸಮಸ
ಅವನಿಗೆ ಎದುರಾಗಿದೆ.

ಸಮಸ್ಯೆಯಿಲ್ಲದ ಯಾವ ಸಂಸಾರವೂ ಇಲ್ಲ
ಸಮಸ್ಯೆಗಳಿಲ್ಲದ ವ್ಯಕ್ತಿ ಇಲ್ಲ. ಸಮಸ್ಯೆಗಳಿಲ್ಲ
ಯಾವರಾಷ್ಟ್ರವೂ ಇಲ್ಲ. ಸ್ವತಃ ಪಾರ್ಥ, ಅವ
ಅಗ್ರಜರು, ತಮ್ಮಂದಿರೂ ಯಾರೂ ಸಮಸ
ಗಳಿಂದ ಮುಕ್ತರಾಗಿಲ್ಲ

ಸಮಸ್ಯೆಗಳು ನಾನಾಬಗೆ. ಪಾರ್ಥನ ಸಮಸ
ಒಂದುಬಗೆಯಾದರೆ ಅವರವರಿಗೆ ಅವರದೇ. ಅ
ಸಮಸ್ಯೆಗಳಿರುತ್ತವೆ. ಸಮಸ್ಯೆಗಳಿವೆಯೆಂದ
ಯೋಚಿಸುತ್ತಾ ಕುಳಿತರೆ, ತಲೆಯ ಮೇಲೆ ಕ
ಹೊತ್ತರೆ ಯಾವ ಕಾರ್ಯವನ್ನು ಸಾಧಿ
ಲಾದೀತು? ಯುದ್ಧವನ್ನು ಮಾಡಬೇಕೆ? ಬೇಡವೇ
ಎನ್ನುವುದು ಪಾರ್ಥನ ಸಮಸ್ಯೆ. ಕಾ

(22 ನೇ ಪುಟನೋಡಿ

# ಗೀತಾರ್ಥಪ್ರಕಾಶ

ಶ್ರೀ ಎಂ.ಓ.ಎಸ್. ಅಯ್ಯಂಗಾರ್

"ಅನಾದಿ ಮಾಯಯಾ ಸುಪ್ತಃ" ಎಂಬಂತೆ ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತಮೋಗುಣಗಳ ಪ್ರಾಬಲ್ಯದಿಂದ ಸಾಂಸಾರಿಕನಾದ (ಎಂದರೆ ಶರೀರದೊಡನಿರುವ) ಜೀವಾತ್ಮನು ತನ್ನ ಶುದ್ಧಾತ್ಮಸ್ವರೂಪ ಗುಣಾದಿಗಳನ್ನು ಮರೆತು ಅಜ್ಞಾನಾವೃತನಾಗಿ ಪ್ರಾಕೃತವಾದ ತನ್ನ ದೇಹವೇ ತಾನೆಂದೂ ಶಬ್ದಾದಿವಿಷಯ ಸುಖಗಳೇ ಪುರುಷಾರ್ಥವೆಂದೂ ಭಾವಿಸಿ, ಅಹಂಕಾರ ಮಮಕಾರ ಪೂರಿತನಾಗಿ, ಕಾಮಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಅರಿಷಡ್ವರ್ಗದ ಪ್ರಾಬಲ್ಯಕ್ಕೆ ವಶನಾಗಿ, ಸತ್ಕರ್ಮ ದುಷ್ಕರ್ಮಗಳಲ್ಲಿ ನಿರತನಾಗಿದ್ದು, ಈ ಅಭ್ಯಾಸಗಳಿಂದ ಕರ್ಮತತ್ತ್ವದ ಪ್ರಕಾರ ಅನಾದಿಕಾಲದಿಂದಲೂ ಜನ್ಮಮರಣ ರೂಪವಾದ ಸಂಸಾರಪ್ರವಾಹದ ಸುಳಿಯಲ್ಲಿ ಸಿಕ್ಕಿಕೊಂಡು, ದೇಹ ಧರ್ಮವಾದ ಹಸಿವು ಬಾಯಾರಿಕೆ ದುಃಖ ರೋಗ ಇತ್ಯಾದಿಗಳೇ ತನಗೆ ಸಹಜವಾದ ಧರ್ಮವೆಂದು ನೆನೆದು ಕಷ್ಟಪಡುತ್ತಿರುವನು. ಈ ಅಜ್ಞಾನದ ಫಲವಾಗಿ ತನ್ನಲ್ಲುಂಟಾಗುವ ರಾಗದ್ವೇಷಗಳಿಂದ ತನಗೆ ಅನುಕೂಲರಾದವರ ವಿಷಯದಲ್ಲಿ ಪ್ರೀತಿಯೂ ಪ್ರತಿಕೂಲರಾದವರ ವಿಷಯದಲ್ಲಿ ದ್ವೇಷವೂ ಅವನಲ್ಲಿ ಉಂಟಾಗುವುದು. ಇದು ಶಾಸ್ತ್ರಜ್ಞಾನವಿಲ್ಲದೆ ಪ್ರಾಪಂಚಿಕ ವಿಷಯ ಸುಖಗಳಲ್ಲಿ ಮುಳುಗಿರುವ ಮಾನವನ ಸ್ಥಿತಿ.

ಭಗವದ್ಗೀತೆಯ ಮೊದಲನೆಯ ಶ್ಲೋಕವಾದ "ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ। ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥" ಎಂಬ ಶ್ಲೋಕವು ಅರ್ಥಗರ್ಭಿತವಾದದ್ದು. ಇದು ಭಾರತ ಯುದ್ಧಾರಂಭ ಸಮಯದಲ್ಲಿ ಧೃತರಾಷ್ಟ್ರನು ಸಂಜಯನಿಗೆ ಹೇಳಿದ ಮಾತು. ಅಂತರ್ಬಹಿಶ್ಚ ಕುರುಡನಾದ, ಎಂದರೆ ಕಣ್ಣುಗಳಿಲ್ಲದೆ ಕುರುಡನಾಗಿದ್ದು ಮತ್ತು ಅಜ್ಞಾನವೆಂಬ ಅಂಧಕಾರದಿಂದ ಹೃದಯವೂ ಕುರುಡಾಗಿದ್ದ ಧೃತರಾಷ್ಟ್ರನನ್ನು ನಮ್ಮಂಥಾ ಸಾಂಸಾರಿಕ ಜೀವಿಗಳಿಗೆ ಹೋಲಿಸಬಹುದು. ಹೇಗೆಂದರೆ–ಕಣ್ಣುಗಳಿದ್ದೂ ದುಷ್ಕಾರ್ಯಗಳಲ್ಲಿ ಪ್ರವೇಶಿಸುತ್ತೇವೆ ಮತ್ತು ಹೃದಯದಲ್ಲಿ ಅಜ್ಞಾನವೂ ನೆಲೆಸಿರುವುದು. ಧರ್ಮಕ್ಷೇತ್ರವೆಂದು ಪ್ರಸಿದ್ಧವಾದ ಕುರುಕ್ಷೇತ್ರದಲ್ಲಿ ಭಾರತಯುದ್ಧವು ನಡೆಯಿತು. "ಕ್ಷೇತ್ರ" ವೆಂಬ ಹೆಸರು, "ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ॥" (ಭ. ಗೀ. 13–1) ಎಂಬ ಭಗವದ್ಗೀತಾವಚನದಂತೆ ಮಾನವನ ದೇಹವನ್ನು ನಿರ್ದೇಶಿಸುವುದು. ಪ್ರಳಯಕಾಲದಲ್ಲಿ ತನ್ನಲ್ಲಿ ಲೀನವಾಗಿರುವ ಜೀವಾತ್ಮರಿಗೆ ತನ್ನನ್ನು ಉಪಾಸಿಸಿ ಮುಕ್ತಿಯನ್ನು ಪಡೆಯಲಿ ಎಂದು ಶರೀರೇಂದ್ರಿಯಗಳನ್ನು ಪರಮಾತ್ಮನು ಅನುಗ್ರಹಿಸಿರುವುದರಿಂದ ಈ ಶರೀರವು ಒಂದು ಧರ್ಮಕ್ಷೇತ್ರವು. "ಕುರುಕ್ಷೇತ್ರೇ" ಎಂಬಲ್ಲಿ 'ಕುರು' ಎಂದರೆ ಮಾಡು ಎಂಬ ಅರ್ಥದಲ್ಲಿ ಕರ್ಮವನ್ನು ನಿರ್ದೇಶಿಸುವುದು. ಕರ್ಮಗಳಿಗೆ ಆಶ್ರಯವಾದ ಶರೀರವನ್ನು "ಕುರುಕ್ಷೇತ್ರ" ವೆನ್ನಬಹುದು. ಸತ್ತ್ವಪೂರಿತವಾದ ಸದ್ಗುಣಗಳಿಗೆ ಆಶ್ರಯವಾಗಿರಬೇಕಾದ (ಕುರುಕ್ಷೇತ್ರವಾದ) ಈ ದೇಹದಲ್ಲಿ ದುಷ್ಟರಾದ ಕೌರವರಂತೆ ನೂರಾರು ದುರ್ಗುಣಗಳು ಸೇರಿಕೊಂಡಿವೆ. ಐದು ಬೆರಳುಗಳಲ್ಲಿ ಲೆಕ್ಕ ಮಾಡಬಹುದಾದ ಅತ್ಯಲ್ಪವಾದ ಸದ್ಗುಣಗಳು, ವನವಾಸಾನಂತರ ಅಜ್ಞಾತವಾಸ ಮಾಡುತ್ತಿದ್ದ ಪಂಚಪಾಂಡವರಂತೆ ಹೃದಯದ ಒಂದು ಮೂಲೆಯಲ್ಲಿ ಅಡಗಿಕೊಂಡಿವೆ. ಅಂಧನಾದ ಧೃತರಾಷ್ಟ್ರನಿಗೆ ದುರ್ಗುಣಗಳಿಂದ ಕೂಡಿಕೊಂಡಿರುವ ತನ್ನ ಮಕ್ಕಳಮೇಲಿನ ಮಮಕಾರದಿಂದಾಗಿ "ಮಾಮಕಾಃ" (ಎಂದರೆ ನನ್ನವರು) ಎಂದು ಉದ್ಘೋಷಿಸಿ ಅನಂತರ "ಪಾಂಡವಾಶ್ಚೈವ" ಎಂದು ಹೊರಗಿನವರನ್ನು ನಿರ್ದೇಶಿಸುವಂತೆ ಹೇಳಿರುವನು. ಸಾಂಸಾರಿಕನಾದ ಜೀವನು ತನ್ನನ್ನು ಉದ್ಧರಿಸಿಕೊಳ್ಳಬೇಕಾದರೆ ಅಲ್ಪವಾಗಿ ತನ್ನಲ್ಲಿ ಸೇರಿಕೊಂಡಿರುವ ಸದ್ಗುಣ ಮತ್ತು ಶತ್ರುಸೈನ್ಯದಂತೆ ದೊಡ್ಡದಾಗಿ ತುಂಬಿರುವ ದುರ್ಗುಣಗಳ ಮಧ್ಯೆ ದೊಡ್ಡ ಭಾರತಯುದ್ಧವೇ ಜೀವಿತದಲ್ಲಿ ಜರುಗಬೇಕು. ಸದ್ಗುಣಗಳ ಪಕ್ಷವನ್ನು ವಹಿಸುವ ಅಂತರ್ಯಾಮಿಯಾದ ಪರಮಾತ್ಮನೇ ಸಾರಥ್ಯವನ್ನು ಮಾಡಿ ಜೀವಿತವೆಂಬ ರಥವನ್ನು ಸರಿಯಾಗಿ ನಡೆಸಿಕೊಂಡು ಹೋಗಬೇಕು.

ಈ ಪ್ರಪಂಚವೇ ಒಂದು ಕರ್ಮರಂಗ, (ಕುರುಕ್ಷೇತ್ರ) ಕರ್ಮದಿಂದಲೇ ಜೀವಿಸಿರುವುದು. ಅವನವನ ಸುಕೃತದುಷ್ಕೃತಗಳಿಗನುಸಾರವಾಗಿ ಪರಮಾತ್ಮನು ಸುಖದುಃಖಗಳನ್ನುಂಟುಮಾಡುವುದರಿಂದ ಮಾನವನು ಕರ್ಮಪರತಂತ್ರನೆನಿಸುವನು. ಜೀವಿಗಳ ಕರ್ಮಗಳೇ ಪ್ರಪಂಚಸೃಷ್ಟಿಗೆ ಮೂಲಕಾರಣ. "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣ ಕರ್ಮ ವಿಭಾಗಶಃ" (ಭ. ಗೀ. 4–13) ಎಂಬ ಭಗವದ್ವಚನದ ಪ್ರಕಾರ ಅವರವರ ಗುಣಕರ್ಮಗಳನ್ನನುಸರಿಸಿಯೇ ಅವರಿಗೆ ಜನ್ಮಗಳನ್ನು ಕೊಡುವೆನು ಎಂಬ ತನ್ನ ನಿಯಮದ ಪ್ರಕಾರ ಪರಮಾತ್ಮನನ್ನೂ ಒಂದು ವಿಧದಲ್ಲಿ ಕರ್ಮ ಪರತಂತ್ರನೆನ್ನಬಹುದು. "ಕರ್ಮಣ್ಯೇವಾಧಿಕಾರಸ್ತೇ" (ಭ. ಗೀ. 2–47) ಎಂಬ ಗೀತಾವಚನದಂತೆ ಪ್ರತಿ ಮಾನವನಿಗೂ ಅವನವನು ಮಾಡಬೇಕೆಂದಿರುವ ಕರ್ಮಗಳಿಗೆ ಪರಮಾತ್ಮನು ಪೂರ್ಣ ಸ್ವಾತಂತ್ರ್ಯವನ್ನಿತ್ತಿರುವನು.

ಈ ವಿಧವಾದ ಜೀವಿತದಿಂದ ತಪ್ಪಿಸಿಕೊಂಡು ಮುಕ್ತನಾಗಿ ಅಖಂಡಾನಂದವನ್ನು ಅನುಭವಿಸಬೇಕಾದರೆ ಚಿತ್ತು ಅಚಿತ್ತುಗಳ ಯಥಾರ್ಥ ಜ್ಞಾನವೂ, ಪರಮಾತ್ಮನ ಸ್ವರೂಪ ರೂಪ ಗುಣ ವಿಭವೈಶ್ವರ್ಯಾದಿಗಳ ಜ್ಞಾನವೂ ಉಂಟಾಗಬೇಕು. ಈ ಜ್ಞಾನವನ್ನು ಶಾಸ್ತ್ರಪಠನದಿಂದಾಗಲಿ, ಒಬ್ಬ ಸದ್ಗುರುವಿನ ಉಪದೇಶದಿಂದಾಗಲಿ ಪಡೆಯಬಹುದು. ವೇದಾಂತಾದಿ ಶಾಸ್ತ್ರಗಳನ್ನು ಸತ್ವರಜಸ್ತಮೋಗುಣಗಳಿಂದ ಕೂಡಿರುವ ಮಾನವರಿಂದ ಸರಿಯಾಗಿ ಅರ್ಥಮಾಡಿಕೊಳ್ಳಲಾಗುವುದಿಲ್ಲ. ಸಾತ್ತ್ವಿಕರಾದ ಜ್ಞಾನಿಗಳಿಗೂ ಭಗವದನುಗ್ರಹದಿಂದ ಮಾತ್ರವೇ ಅವು ಸರಿಯಾಗಿ ಅರ್ಥವಾಗುವುವು. ವೇದಾಂತಾದಿ ಶಾಸ್ತ್ರಗಳನ್ನು ಅನುಗ್ರಹಿಸಿದ ಪರಮಾತ್ಮನೇ ಅವುಗಳ ಸಾರವನ್ನು ಭಗವದ್ಗೀತಾರೂಪದಲ್ಲಿ ಉಪದೇಶಿಸಿರುವುದರಿಂದ ಇದನ್ನು ಸರ್ವೋತ್ಕೃಷ್ಟವಾದ ಪ್ರಮಾಣ ಗ್ರಂಥವೆನ್ನಬಹುದು. "ವೇದಾಂತಕೃದ್ವೇದವಿದೇವ ಚಾಹಂ" (ಭ. ಗೀ. 15–15) ಎಂದರೆ ವೇದವೇದಾಂತಗಳನ್ನು ಅನುಗ್ರಹಿಸಿದ ನಾನೇ ಅವುಗಳ ಅರ್ಥವನ್ನು ಸರಿಯಾಗಿ ತಿಳಿದವನು" ಎಂಬ ಭಗವದ್ವಚನವು ಇದಕ್ಕೆ ಪ್ರಮಾಣವು.

ಭಾರತಯುದ್ಧಾರಂಭ ಸಮಯದಲ್ಲಿ ಅರ್ಜುನನು, ಯಾರ ಆದರದಿಂದ ತಾನೂ ಮತ್ತು ತನ್ನ ಅಣ್ಣತಮ್ಮಂದಿರೂ ಬಾಲ್ಯದಲ್ಲಿ ಬೆಳೆದರೋ, ಅಂತಹ ಕೇವಲ ಸಮೀಪಬಂಧು

ಗಳಾದ ಭೀಷ್ಮಾದಿಗಳೂ, ಗುರುವಾದ ದ್ರೋಣಾಚಾರ್ಯರೂ ಎದುರಾಳಿಗಳಾಗಿ ಯುದ್ಧಕ್ಕೆ ಸಿದ್ಧರಾಗಿರುವುದನ್ನು ನೋಡಿ ಬಂಧುಸ್ನೇಹಪರವಶನಾಗಿ ಯುದ್ಧಮಾಡಲಾರದೆ ತನಗೆ ಸಾರಥಿಯಾಗಿ ತನ್ನ ಮುಂದೆ ಕುಳಿತಿದ್ದ ಶ್ರೀಕೃಷ್ಣನೊಡನೆ ತನ್ನ ದುಃಖವನ್ನು ತೋಡಿಕೊಂಡನು. ಅಣ್ಣ ತಮ್ಮಂದಿರಾದ ತಾವೈವರೂ ವನವಾಸ ಮಾಡುತ್ತಿದ್ದಾಗ, ಇದಕ್ಕೆ ಮೊದಲು ಪಾಂಡವರು ದ್ಯೂತದಲ್ಲಿ ಸೋತು ಒಪ್ಪಂದದ ಪ್ರಕಾರ ತಮ್ಮ ವನವಾಸ ಮತ್ತು ಅಜ್ಞಾತವಾಸಗಳ ಅಂತ್ಯದಲ್ಲಿ ತಮಗೆ ಬರಬೇಕಾದ ರಾಜ್ಯವನ್ನು ದುರ್ಯೋಧನನು ಕೊಡುವುದಿಲ್ಲವೆಂದೂ, ಯುದ್ಧವು ಅನಿವಾರ್ಯವಾಗಬಹುದೆಂದೂ ನೆನೆದು ಅದಕ್ಕಾಗಿ ಅರ್ಜುನನು ತಪಸ್ಸನ್ನಾಚರಿಸಿ ಪರಮಶಿವನಿಂದ ಪಾಶುಪತಾಸ್ತ್ರವನ್ನೂ, ಇಂದ್ರನಿಂದ ಅನೇಕ ಉತ್ತಮವಾದ ಅಸ್ತ್ರಶಸ್ತ್ರಗಳನ್ನೂ ಪಡೆದುಕೊಂಡಿದ್ದನು. ಪಾಂಡವರ ಕಡೆಗೆ ದೂತನಾಗಿ ಶ್ರೀಕೃಷ್ಣನೇ ಕೌರವರೊಡನೆ ಸಂಧಿಗೆ ಪ್ರಯತ್ನಿಸಿ ವಿಫಲನಾಗಿ ಕೊನೆಗೆ ಭಾರತಯುದ್ಧವು ಅನಿವಾರ್ಯವಾಯಿತು. ಯುದ್ಧಕ್ಕಾಗಿ ಶ್ರೀಕೃಷ್ಣನ ನೆರವನ್ನು ಕೋರಿ ಅರ್ಜುನ ಅವನನ್ನು ಸಾರಥಿಯನ್ನಾಗಿ ನಿಯಮಿಸಿಕೊಂಡನು. ಎರಡು ಪಕ್ಷದ ಸೈನ್ಯಗಳೂ ಯುದ್ಧಸನ್ನದ್ಧವಾಗಿ ಇನ್ನೇನು ಯುದ್ಧವು ಆರಂಭವಾಗುವ ಸಮಯದಲ್ಲಿ ಅರ್ಜುನನಲ್ಲಿ ಮೂಡಿಬಂದ ಈ ಮೋಹದ ದೌರ್ಬಲ್ಯವನ್ನು ಕಂಡು, ಇದು ವೀರಕ್ಷತ್ರಿಯನಿಗೆ ತರವಲ್ಲವೆಂದು ಅವನ ಮೋಹವನ್ನು ನೀಗಿಸಿ ಧೈರ್ಯವನ್ನುಂಟುಮಾಡಲು ಶ್ರೀಕೃಷ್ಣನು ಆ ಯುದ್ಧರಂಗದಲ್ಲಿ ಗೀತಾಶಾಸ್ತ್ರವನ್ನು ಅವನಿಗೆ ಬೋಧಿಸಿದನು. ಆ ವ್ಯಾಜದಿಂದ ಮುಂದಿನ ಪ್ರಪಂಚಕ್ಕೇ ಗೀತಾಶಾಸ್ತ್ರವನ್ನು ಅನುಗ್ರಹಿಸಿದನೆನ್ನಬಹುದು.

ಗೀತಾಶಾಸ್ತ್ರವು ಅವತರಿಸುವುದಕ್ಕೆ ಮತ್ತೊಂದು ಕಾರಣವನ್ನು ಊಹಿಸಬಹುದು. ಇತಿಹಾಸ ಪುರಾಣಗಳನ್ನು ಓದುವಾಗ ಕೃತ ತ್ರೇತಾಯುಗಗಳಲ್ಲಿ ಸಾಧಕರು ಮುಕ್ತಿಗಾಗಿ ಬಹಳ ಶ್ರಮಪಡಬೇಕಾಗಿತ್ತು. ಸಾಂಸಾರಿಕರ ಸಹವಾಸವನ್ನು ತೊರೆದು ಕಾಡಿಗೆ ಹೋಗಿ ಅಲ್ಲಿ ಒಬ್ಬ ಗುರುವನ್ನು ಆಶ್ರಯಿಸಿ ಇಂದ್ರಿಯ ನಿಗ್ರಹ ಮನೋನಿಗ್ರಹಗಳಿಗಾಗಿ ಕಠಿಣವಾದ ನಿಯಮಗಳನ್ನು ಪಾಲಿಸುತ್ತಾ ಅನೇಕ ವರ್ಷಗಳು ತಪಸ್ಸನ್ನಾಚರಿಸುತ್ತಿದ್ದರು. ಆ ಕಾಲದ ಜನರು ಸಹಸ್ರಾರು ವರ್ಷಗಳು ಜೀವಿಸುತ್ತಿದ್ದುದಾಗಿ ಕಂಡುಬರುವುದು. ಕಲಿಯುಗದ ಈಗಿನ ಜನರ ಶಾರೀರಕ ಮತ್ತು ಮಾನಸಿಕ ದೌರ್ಬಲ್ಯವನ್ನು ನೋಡುವಾಗ ಇವರಿಗೆ ಆ ವಿಧವಾದ ಕಠಿಣವಾದ ನಿಯಮಗಳೂ ತಪಸ್ಸಾಧನೆಯೂ ಅಸಾಧ್ಯವೆಂದೇ ಹೇಳಬೇಕು. ಕಲಿಯುಗದ ಜನರ ಈ ದೌರ್ಬಲ್ಯವನ್ನು ಅರಿತೇ ಪರಮಾತ್ಮನು ದ್ವಾಪರ ಯುಗಾಂತ್ಯದಲ್ಲಿ ಭಗವದ್ಗೀತೆಯ ಮೂಲಕ ಸುಲಭವಾದ ನಾಲ್ಕುಮಾರ್ಗಗಳನ್ನು ಮುಕ್ತಿಗೆ ಸಾಧನರೂಪವಾಗಿ ಉಪದೇಶಿಸಿದನೆನ್ನಬಹುದು. ಅವುಗಳೇ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮತ್ತು ಪ್ರಪತ್ತಿಯೋಗ ಅಥವಾ ಶರಣಾಗತಿ. ಇವುಗಳನ್ನು ಅಭ್ಯಾಸಮಾಡುವುದಕ್ಕೆ ಕಾಡಿಗೆ ಹೋಗಬೇಕಾಗಿಲ್ಲ. ಊರಿನಲ್ಲೇ, ತನ್ನ ಮನೆಯಲ್ಲೇ ಇದ್ದುಕೊಂಡು ಅಭ್ಯಾಸಮಾಡಬಹುದು.

ಭಕ್ತಿಯೋಗವೇ ಅಂತ್ಯದಲ್ಲಿ ಮುಕ್ತಿಗೆ ಆವಶ್ಯಕವಾದ ಸಾಧನೆಯೆಂಬುವುದು ಭಗವದ್ಗೀತೆಯ ಮುಖ್ಯೋಪದೇಶ. ಭಕ್ತಿಯೋಗಾಭ್ಯಾಸಕ್ಕೆ ಪೂರ್ವಭಾವಿಯಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕು. ಎಂದರೆ–ಶುದ್ಧಾತ್ಮನ ಗುಣಗಳ ಅಭ್ಯಾಸವು ತನ್ನಲ್ಲುಂಟಾಗಬೇಕು. ಆತ್ಮಸಾಕ್ಷಾತ್ಕಾರಕ್ಕೆ ಜ್ಞಾನಯೋಗಾಭ್ಯಾಸವು ಒಂದು ಮಾರ್ಗ. ಆದರೆ ಜ್ಞಾನಯೋಗಾಭ್ಯಾಸವನ್ನು ಆರಂಭಿಸುವುದಕ್ಕೆ ಮೊದಲು ಸಂಪೂರ್ಣವಾದ ಇಂದ್ರಿಯಗಳ ಜಯದ ಆವಶ್ಯಕತೆಯಿರುವುದು. ಅದಿಲ್ಲದೆ ಜ್ಞಾನಯೋಗಾಭ್ಯಾಸವನ್ನು ಆರಂಭಿಸಿದರೆ ಪ್ರಮಾದಗಳೇರ್ಪಟ್ಟು ಸಾಧಕನು ಇನ್ನೂ ಅಧೋಗತಿಗೆ ಬೀಳುವ ಅವಕಾಶವಿದೆ. ಇದೇ ಆತ್ಮಸಾಕ್ಷಾತ್ಕಾರವನ್ನು ಕರ್ಮಯೋಗದಿಂದ ಸುಲಭವಾಗಿ ಸಾಧಿಸಬಹುದಾದ್ದರಿಂದ ಶ್ರೀಕೃಷ್ಣನು ಕರ್ಮಯೋಗಾ–ಭ್ಯಾಸದಿಂದಲೇ ಆತ್ಮಸಾಕ್ಷಾತ್ಕಾರವನ್ನು ಪಡೆಯುವಂತೆ ಭಗವದ್ಗೀತೆಯಲ್ಲಿ ಅರ್ಜುನನಿಗೆ ಉಪದೇಶಿಸಿರುವನು. ಈ ಉಪದೇಶವು ನಮಗೆಲ್ಲಾ ಅನ್ವಯಿಸುತ್ತದೆ. ಶಾಸ್ತ್ರಗಳಿಂದ ಈ ಕರ್ಮವನ್ನು ಅರಿತು ಮೆಟ್ಟಿಲು ಮೆಟ್ಟಿಲಾಗಿ ಹತ್ತಿಹೋಗಿ ಅನುಷ್ಠಿಸಬೇಕು.

ಈ ಆರೋಹಣಕ್ರಮದಿಂದಲೇ ಯಾತಕ್ಕೆ ಭಕ್ತಿಯೋಗಾಭ್ಯಾಸವನ್ನು ಆರಂಭಿಸಬೇಕು? ನೇರವಾಗಿ ಭಕ್ತಿಯೋಗಾಭ್ಯಾಸದಿಂದಲೇ ಪ್ರಾರಂಭಿಸಿ ಯಾತಕ್ಕೆ ಮುಕ್ತಿಯನ್ನು ಪಡೆಯಬಾರದು? ಎಂದು ಪ್ರಶ್ನಿಸಬಹುದು. ಕರ್ಮತತ್ತ್ವದಲ್ಲಿ ಒಂದು ರಹಸ್ಯವಿರುವುದು. ಅಜ್ಞಾನಕ್ಕೆ ಕರ್ಮವೇ ಮೂಲವೆಂಬುವುದು ಈ ಸಿದ್ಧಾಂತದ ನಿರ್ಣಯ. ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತಮೋಗುಣಗಳಿಗೆ ವಾಸಸ್ಥಾನವಾದ ಮನಸ್ಸೇ ಮಾನವನ ಸಮಸ್ತ ಕಾರ್ಯಗಳಿಗೂ ಮೂಲವೆಂಬುವುದು ಸುವ್ಯಕ್ತ. ಶರೀರದೊಡನೆ ಹುಟ್ಟಿದ ಜೀವರಾಶಿಗಳಲ್ಲಿ ಈ ತ್ರಿಗುಣಗಳ ಪ್ರಾಬಲ್ಯಕ್ಕೆ ಒಳಗಾಗದವರು ಯಾರೂ ಇಲ್ಲ ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ (14–5) ಹೇಳಿರುವನು. ಇದನ್ನೇ "ದೈವೀಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ" (7–14) ಎಂದರೆ ಗುಣತ್ರಯಾತ್ಮಕವಾದ ನನ್ನ ಮಾಯೆಯೆಂದು ಕರೆಯಲ್ಪಡುವ ಪ್ರಕೃತಿಯು ನನ್ನ ಶರೀರವೇ ಎಂದು ಹೇಳಿ ಮುಂದೆ "ಮಾಮೇವಯೇ ಪ್ರಪದ್ಯನ್ತೇ ಮಾಯಾಮೇತಾಂತರಂತಿ ತೇ" (7–14) ಎಂದರೆ "ನನ್ನಲ್ಲಿ ಶರಣಾಗತಿಯನ್ನು ಮಾಡಿ ನನ್ನ ಅನುಗ್ರಹವನ್ನು ಪಡೆಯದೆ ಸ್ವಪ್ರಯತ್ನದಿಂದ ಈ ತ್ರಿಗುಣಗಳನ್ನು ಯಾರೂ ಜಯಿಸಲಾರರು" ಎಂದು ಹೇಳಿರುವನು. ಇದು ಬ್ರಹ್ಮಲೋಕದಿಂದ ಆರಂಭಿಸಿ ಪಾತಾಳದವರೆಗೂ ಇರುವ ಹದಿನಾಲ್ಕು ಲೋಕಗಳಲ್ಲಿರುವ ಜೀವರಾಶಿಗಳಿಗೆಲ್ಲಾ ಅನ್ವಯಿಸುವುದು. ಈ ಭೂಲೋಕವೊಂದರಲ್ಲೇ ಇರುವ ಮನುಷ್ಯರ ನಡತೆಗಳನ್ನು ನೋಡುವಾಗ ಅವರ ಮನೋವಾಕ್ಕಾಯ ಕರ್ಮಗಳಲ್ಲಿ ಎಲ್ಲ ರೀತಿಯಿಂದಲೂ ಎಳ್ಳಷ್ಟು ವ್ಯತ್ಯಾಸವಿಲ್ಲದ ಇಬ್ಬರನ್ನು–ಹುಡುಕಿದರೂ ಸಿಕ್ಕಲಾರರು. ಉಳಿದ ಜೀವರಾಶಿಗಳಲ್ಲೂ ಈ ವ್ಯತ್ಯಾಸವಿರುವುದೆಂಬುವುದು ಸೂಕ್ಷ್ಮವಾಗಿ ಪರಿಶೀಲಿಸುವವರಿಗೆ ಅರಿವಾಗದಿರಲಾರದು. ಈ ತಾರತಮ್ಯವನ್ನೇ ಪರಮಾತ್ಮನ ಸೃಷ್ಟಿಗೆ ಸೇರಿದ ಹದಿನಾಲ್ಕು ಲೋಕಗಳಲ್ಲಿರುವ ಜೀವರಾಶಿಗಳಿಗೆ ಅನ್ವಯಿಸಿದರೆ ಈ ತಾರತಮ್ಯಗಳನ್ನು ಊಹಿಸುವುದೂ ಅಸಾಧ್ಯ. ಈ ತಾರತಮ್ಯಗಳಿಗೆ ಜೀವರಾಶಿಗಳಲ್ಲಿ ತುಂಬಿರುವ ಸತ್ತ್ವರಜಸ್ತಮೋಗುಣಗಳ ವಿವಿಧ ಮಿಶ್ರಣಗಳೇ ಕಾರಣವಾಗಿ ಅವರವರ ಕರ್ಮಗಳ ಫಲವಾಗಿ ಅವರಲ್ಲಿ ಬೆಳೆದುಬಂದಿವೆ.

ಈ ವಿಧವಾದ ತಾರತಮ್ಯಗಳು ಅವರವರ ನಡತೆಗಳಲ್ಲಿ ಎದ್ದುಕಾಣುವುದು. ಆದರಿಂದಲೇ ಶ್ರೀಕೃಷ್ಣನು "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ" (4–13) ಎಂದು ಭಗವದ್ಗೀತೆಯಲ್ಲಿ ಹೇಳಿರುವನು. ಪ್ರಪಂಚ ಸೃಷ್ಟಿಯಲ್ಲಿ ದೇವಮನುಷ್ಯ ಜಂಗಮ ಸ್ಥಾವರಗಳೆಂಬುವುದೊಂದು ಸ್ಥೂಲವಿಭಾಗ. ಭೂಲೋಕದ ನಮ್ಮ ಭರತಖಂಡದಲ್ಲಿ ವಿವಿಧ ಸಿದ್ಧಾಂತಗಳ ಗುಂಪುಗಳು ಇರುವುವು. ಹಿಂದೂಮತದಲ್ಲಿ ಬ್ರಹ್ಮಕ್ಷತ್ರಿಯ ವೈಶ್ಯಶೂದ್ರರೆಂಬ ವಿಭಾಗಗಳಿರುವುವು. ಮತ್ತು ಜೈನ ಬೌದ್ಧ ಇತ್ಯಾದಿ ಮತಗಳ ಗುಂಪು ಇರುವುವು. ಇದರಿಂದ ಅವರವರ ಕರ್ಮಗಳಲ್ಲೂ ವ್ಯತ್ಯಾಸಗಳಿರುವುದು ಅರಿವಾಗುವುದು. ಪಾಪಕಾರ್ಯದಲ್ಲಿ ಪಾತಕ, ಅತಿಪಾತಕ, ಮಹಾಪಾತಕಗಳೆಂಬ ವ್ಯತ್ಯಾಸಗಳನ್ನು ನಾವು ಕೇಳಿರುವೆವು. ಸತ್ಕರ್ಮಗಳಲ್ಲೂ ಈ ವಿಧವಾದ ವ್ಯತ್ಯಾಸಗಳು ಇರುವುದನ್ನು ಊಹಿಸಬಹುದು.

ಹಿಂದೆ ಒಂದು ಆರೋಹಣಕ್ರಮದಿಂದ ಭಕ್ತಿಯೋಗಾಭ್ಯಾಸಕ್ಕೆ ಮೆಟ್ಟಿಲು ಮೆಟ್ಟಿಲಾಗಿ ಹತ್ತಬೇಕೆಂದು ಹೇಳಿದೆವು. ಮುಕ್ತಿಗೆ ಸಾಧನೆಯನ್ನು ಕರ್ಮಯೋಗದಿಂದ ಆರಂಭಿಸಬೇಕು. ನಿಷ್ಕಾಮ ಕರ್ಮಾಚರಣೆಯಿಂದ ಇದು ಆರಂಭವಾಗುವುದು. ನಿಷ್ಕಾಮಕರ್ಮವೆಂದರೆ ನಾವು ಮಾಡುವ ಕರ್ಮಗಳಿಗೆ ಫಲವನ್ನು ಅರಸದೆ ಲೋಕಕಲ್ಯಾಣಕ್ಕಾಗಿ (ಎಂದರೆ ಇತರರ ಒಳ್ಳೆಯದಕ್ಕಾಗಿ) ಆಚರಿಸುವ ಕರ್ಮಗಳು. ಪೂರ್ವಕಾಲದಲ್ಲಿ ಪ್ರಯಾಣಿಕರ ಸೌಕರ್ಯಕ್ಕಾಗಿ ರಸ್ತೆಗಳಲ್ಲಿ ಅಲ್ಲಲ್ಲಿ ಬಾವಿಗಳು, ತೋಪುಗಳು, ಸತ್ರಗಳು ಇತ್ಯಾದಿಗಳನ್ನು ಕಟ್ಟಿಸುತ್ತಿದ್ದರು. ಮುಕ್ತಿಯನ್ನು ಕೋರುವವರು ಕರ್ತೃತ್ವ, (ಎಂದರೆ – ನಾನು ಮಾಡಿದೆನು ಎಂಬ ಅಹಂಕಾರ, ಮಮಕಾರರೂಪವಾದ ನೆನಪು) ಮತ್ತು ಫಲಸಂಗ (ಎಂದರೆ ಕರ್ಮಫಲದಲ್ಲಿ ಆಸೆ) ಇವುಗಳನ್ನು ತ್ಯಜಿಸಿ ನಿಷ್ಕಾಮಕರ್ಮಗಳನ್ನು ಮಾಡಬೇಕು. ಯಾತಕ್ಕೆಂದರೆ–ಫಲದಲ್ಲಿ ಆಸೆಯಿಟ್ಟುಕೊಂಡು ಮಾಡಿದ ಕರ್ಮಗಳ ಫಲವನ್ನು ತಾನೇ ಅನುಭವಿಸಬೇಕಾದ್ದರಿಂದ ಅದಕ್ಕಾಗಿ ಮುಂದೆ ಜನ್ಮಗಳನ್ನು ಎತ್ತಬೇಕಾಗುವುದು. ಮುಕ್ತಿಯನ್ನು ಕೋರುವವನಿಗೆ ಇದು ವಿಘ್ನಕಾರಿಯಾಗುವುದು. ಶಾಸ್ತ್ರರೀತ್ಯಾ ವರ್ಣಾಶ್ರಮ ಧರ್ಮಗಳನ್ನು ತಪ್ಪದೆ ಆಚರಿಸಬೇಕು. ಇದರಿಂದ ಪಾಪಕ್ಷಯವೂ ಮನೋನೈರ್ಮಲ್ಯವೂ ಉಂಟಾಗುವುವು. ಮನಶ್ಶುದ್ಧಿಯಿಂದ ಸತ್ತ್ವಗುಣಾಭಿವೃದ್ಧಿಯಾಗುವುದು. ಶಾಸ್ತ್ರರೀತ್ಯಾ ಈ ನಿಷ್ಕಾಮಕರ್ಮಗಳು ಮಾನವನ ಸಂಚಿತ ಕರ್ಮಗಳ ಬಹುಭಾಗವನ್ನು ನಾಶಮಾಡುವುವು. ಇದನ್ನು ಭಗವದ್ಗೀತೆಯಲ್ಲೇ ಶ್ರೀ ಕೃಷ್ಣನು ಹೇಳಿರುವನು. ಕರ್ಮವು ನಾಶವಾದಂತೆಲ್ಲಾ ಅವನ ಮನಸ್ಸಿನಲ್ಲಿ ಸೇರಿಕೊಂಡಿರುವ ರಾಜಸ ತಾಮಸ ಗುಣಗಳು ಸ್ವಲ್ಪಸ್ವಲ್ಪವಾಗಿ ನಾಶವಾಗುತ್ತಾ ಅದಕ್ಕನುಗುಣವಾಗಿ ಸಾತ್ತ್ವಿಕ ಗುಣವೂ, ಮನೋನೈರ್ಮಲ್ಯವೂ ಆಸ್ತಿಕತೆಯೂ ಅಭಿವೃದ್ಧಿಯಾಗುವುವು. ಕರ್ಮಯೋಗಸಿದ್ಧಿಗೆ ವಿಘ್ನಕಾರಿಯಾದ ಕರ್ಮಗಳೆಲ್ಲಾ ಕಳೆದಮೇಲೆ ಜ್ಞಾನಯೋಗವು (ಎಂದರೆ ಆತ್ಮಜ್ಞಾನವು) ಕುದುರುವುದು. ಜ್ಞಾನಯೋಗಾಭಿವೃದ್ಧಿಗೆ ಕೆಲವು ಕರ್ಮಗಳ ನಾಶ ಅತ್ಯಗತ್ಯ. ಈ ಜ್ಞಾನಾಭಿವೃದ್ಧಿಯಿಂದ ಇಂದ್ರಿಯಜಯವೂ ಮನೋಜಯವೂ ಉಂಟಾಗುವುವು. ಆತ್ಮಸಾಕ್ಷಾತ್ಕಾರಕ್ಕೆ ವಿರೋಧಿಯಾದ ಕರ್ಮಗಳು ಕಳೆದರೆ ಆತ್ಮಸಾಕ್ಷಾತ್ಕಾರಕ್ಕೆ ಸಹಕರಿಸುವುದು. ಹೀಗೆಯೇ ಇನ್ನು ಮುಂದೆ ಭಕ್ತಿಯೋಗಾಭ್ಯಾಸದ ಆರಂಭಕ್ಕೆ ವಿರೋಧಿಯಾದ ಕೆಲವು ಕರ್ಮಗಳಿರುವುವು. ಈ ಕರ್ಮಗಳು ಕಳೆದರೆ ಭಕ್ತಿಯೋಗವು ಕುದುರುವುದು. ಭಕ್ತಿಯೋಗಾಭ್ಯಾಸದಿಂದ ಮುಕ್ತಿಗೆ ವಿರೋಧಿಯಾದ ಕರ್ಮಗಳು ಕಳೆಯುವುವು. ಈ ವಿರೋಧಿಗಳೆಲ್ಲವೂ ನಾಶವಾಗುವವರೆಗೂ ಭಗವದನುಗ್ರಹವೂ ಮುಕ್ತಿಯೂ ದೊರಕುವುದಿಲ್ಲ. ಭಕ್ತಿಯೋಗದ ಪಕ್ವದೆಸೆಯಲ್ಲಿ ಮುಕ್ತಿ ದೊರಕುವುದು. ಇದರಿಂದ ಭಕ್ತಿಯೋಗಾಭ್ಯಾಸಕ್ಕೆ ವಿಘ್ನಕಾರಿಯಾದ ಈ ಕರ್ಮಗಳೆಲ್ಲಾ ಮೆಟ್ಟಿಲು ಮೆಟ್ಟಿಲಾಗಿ ಕಳೆಯುತ್ತಾ ಬರಬೇಕೆಂಬುದು ವ್ಯಕ್ತವಾಗುವುದು.

ಈ ವಿಧವಾದ ಮುಕ್ತಿಯು ತಾನು ಮಾಡಿದ ಸಾಧನೆಯಿಂದಲೇ ಉಂಟಾಯಿತೆಂದೂ, ಇದಕ್ಕೆ ಮೊದಲು ಕರ್ಮಯೋಗದಿಂದ ಆರಂಭಿಸಿ ಭಕ್ತಿಯೋಗವು ಫಲಿಸುವವರೆಗೂ ಸಾಧಕನು ತನ್ನ ಸ್ವಪ್ರಯತ್ನದಿಂದ ಹಂತ ಹಂತವಾಗಿ ಅಭಿವೃದ್ಧಿಗೆ ಬಂದೆನೆಂದೂ ನೆನೆಯುವುದು ಶುದ್ಧ ತಪ್ಪುತಿಳುವಳಿಕೆ. ವಿದ್ಯಾಭ್ಯಾಸದಲ್ಲಿ ಪ್ರಾಥಮಿಕ ತರಗತಿಯಿಂದ ಆರಂಭಿಸಿ ವಿದ್ವಾಂಸನಾಗುವ ಒಂದೊಂದು ತರಗತಿಯಲ್ಲೂ ಉಪಾಧ್ಯಾಯರೂ ಪ್ರೊಫೆಸರುಗಳೂ ಇದ್ದು ತರಬೇತು ಮಾಡುವರಲ್ಲವೆ? ಅಂತರ್ಯಾಮಿಯಾಗಿ ಒಳಗೇ ಇರುವ ಪರಮಾತ್ಮನು ಆರಂಭದಿಂದ ಕೊನೆಯವರೆಗೂ ಅವಶ್ಯಕವಾದ ಉಪಾಧ್ಯಾಯರ ಮತ್ತು ಪ್ರೊಫೆಸರುಗಳ ಕಾರ್ಯವನ್ನು ಮಾಡಿ ತನ್ನನ್ನು ಅಭಿವೃದ್ಧಿಗೆ ತಂದಿರುವನೆಂಬುವುದನ್ನು ಮರೆಯದೆ ಆ ಉಪಕಾರಸ್ಮೃತಿಯಿಂದ ಭಕ್ತಿಯಿಂದ ಪರಮಾತ್ಮನನ್ನು ಪೂಜಿಸುತ್ತಿರಬೇಕು. ಕಾರ್ಯಸಾಧನೆಗೆ ಪರಮಾತ್ಮನು ಚೇತನನ ಪ್ರಯತ್ನವನ್ನು ಅಪೇಕ್ಷಿಸಿದರೂ ಪ್ರಯತ್ನವು ಫಲಿಸುವುದಕ್ಕೆ ಪರಮಾತ್ಮ ಸಹಾಯವೂ ಅನುಗ್ರಹವೂ ಅತ್ಯಗತ್ಯ. ಕಾರ್ಯಸಾಧನೆಗೆ ಇವೆರಡೂ ಕಲೆತೇ ಇರಬೇಕು. ಈ ವಿಚಾರವನ್ನೆಲ್ಲಾ ಭಗವದ್ಗೀತೆಯಲ್ಲಿ ನೇರವಾಗಿ ಹೇಳದಿದ್ದರೂ "ದೈವೀಹ್ಯೇಷಾಗುಣಮಯೀ..." (ಭ.ಗೀ. 7-14) ಎಂದು ಹಿಂದೆ ಹೇಳಿದ ಭಗವದ್ವಾಕ್ಯದ ವಿಮರ್ಶನದಿಂದ ಈ ನಿರ್ಧಾರವು ಏರ್ಪಡುವುದು. ನಮ್ಮ ಪೂರ್ವಾಚಾರ್ಯರುಗಳು ತಮ್ಮ "ರಹಸ್ಯತ್ರಯ"ವೆಂಬ ಗ್ರಂಥದಲ್ಲಿ "ವಿರೋಧಿಸ್ವರೂಪಗಳು'' ಎಂಬ ವಿಷಯವನ್ನು ವಿಮರ್ಶಿಸುವಾಗ ಇದನ್ನೆಲ್ಲಾ ಹೇಳಿರುವರು.

ಕೃಷ್ಣಾವತಾರದ ಅನಂತರ ಭಾರತದಲ್ಲಿ ಭಕ್ತಿಮಾರ್ಗವು ಬಹಳಷ್ಟು ಪ್ರಚಾರಕ್ಕೆ ಬಂದಿತು. ಪಂಢರಿನಾಥನಾದ ಪಾಂಡುರಂಗವಿಠಲನ ಭಕ್ತರು ಮಹಾರಾಷ್ಟ್ರದಲ್ಲೂ ಉತ್ತರಭಾರತದಲ್ಲೂ ಅನೇಕರು ಅವತರಿಸಿದ್ದರು. ನಾಮದೇವ, ತುಕಾರಾಂ, ಜಯದೇವ, ಗೌರಾಂಗ, ಮೀರಾಬಾಯಿ, ಚೈತನ್ಯ ಇತ್ಯಾದಿ ಪ್ರಧಾನ ಕೃಷ್ಣಭಕ್ತರ ಚರಿತ್ರೆಗಳು ಭಾರತದಲ್ಲಿ ಪ್ರಚಾರದಲ್ಲಿರುವುವು. 'ಕೃಷ್ಣಕಲ್ಟ್' (Krishna-cult) ಎಂಬ ಕೃಷ್ಣಭಕ್ತರ ಸಂಘವು ಈಗಲೂ ಇರುವುದು. ದಕ್ಷಿಣಭಾರತದಲ್ಲಿ ದ್ವಾಪರಯುಗಾಂತ್ಯದಿಂದ ಶ್ರೀ ವೈಷ್ಣವ ಆಳ್ವಾರುಗಳ ಅವತಾರವು ಪ್ರಾರಂಭವಾಗಿ ಭಗವದ್ಗೀತೋಪದೇಶದ ಸಾರವನ್ನು ತಮ್ಮ ದಿವ್ಯಪ್ರಬಂಧಗಳಲ್ಲಿ ಹಾಡಿರುವರು. ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಭಗವದ್ಗೀತೋಪದೇಶದ ಸಾರವನ್ನು ಸಂಪೂರ್ಣವಾಗಿ ಅಳವಡಿಸಿಕೊಂಡಿರುವುದು ವ್ಯಕ್ತವಾಗುವುದು. ಭಗವದ್ರಾಮಾನುಜಾಚಾರ್ಯರು ತಮ್ಮ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಮುಕ್ತಿಗೆ ಭಕ್ತಿಯೋಗವೇ ವೇದಾಂತ ಪ್ರತಿಪಾದ್ಯವಾದ ಸಾಧನವೆಂಬುದನ್ನು ವೇದಾಂತ ಮತ್ತು ಸ್ಮೃತೀತಿಹಾಸ ಪುರಾಣಗಳ ಆಧಾರದಿಂದ ತೋರಿಸಿಕೊಟ್ಟಿರುವರು. ಶ್ರೀ ಶಂಕರಾಚಾರ್ಯರ ಅದ್ವೈತಸಿದ್ಧಾಂತದಲ್ಲಿ ಮುಕ್ತಿಗೆ ಜ್ಞಾನಯೋಗವೇ ಮುಖ್ಯಸಾಧನವೆಂದು ಹೇಳಿ ಕರ್ಮಯೋಗವನ್ನು ನಿರಾಕರಿಸಿರುವರು. ಹಿಂದೆ ಹೇಳಿದಂತೆ ಮೋಕ್ಷದಲ್ಲಿ ಇಚ್ಛೆಯುಂಟಾದ ಕೂಡಲೇ ಜ್ಞಾನಯೋಗಾಭ್ಯಾಸವನ್ನು ಆರಂಭಿಸುವುದು ಅಪಾಯಕಾರಿಯೆಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಬೋಧಿಸಿರುವುದನ್ನು ಗಮನಿಸಿ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಕರ್ಮಯೋಗಾಭ್ಯಾಸದಿಂದಲೇ ಸಾಧನೆಯು ಆರಂಭಿಸಲ್ಪಟ್ಟು, ಅದರಿಂದಲೇ ಜ್ಞಾನಯೋಗದ ಫಲವಾದ ಆತ್ಮಸಾಕ್ಷಾತ್ಕಾರವನ್ನು ಪಡೆದು ಅನಂತರ ಭಕ್ತಿಯೋಗವನ್ನು ಆರಂಭಿಸಬೇಕೆಂದು ಹೇಳಿರುವುದು. ನವವಿಧ ಭಕ್ತಿಗಳಲ್ಲಿಯೂ ಕರ್ಮವೇ ತಳಹದಿಯಾದ್ದರಿಂದ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಜ್ಞಾನಯೋಗ, ಭಕ್ತಿಯೋಗ ಪ್ರಪತ್ತಿಯೋಗಗಳಲ್ಲೆಲ್ಲಾ ಕರ್ಮಯೋಗವು ಕಲೆತೇ ಇರುವುದು. 'ತತ್ತ್ವಮಸಿ' ಇತ್ಯಾದಿ ವಾಕ್ಯಜನ್ಯಜ್ಞಾನವೇ ಮೋಕ್ಷಸಾಧನವೆಂದೂ, ಕರ್ಮಜ್ಞಾನಸಮುಚ್ಚಯವೇ ಮೋಕ್ಷಸಾಧನವೆಂದೂ ಹೇಳುವ ಸಿದ್ಧಾಂತಗಳನ್ನು ನಿರಾಕರಿಸಿ, ಕರ್ಮಾಂಗವಾಗಿ ವೇದಧ್ಯಾನೋಪಾಸನಾದಿ ಶಬ್ದವಾಚ್ಯವಾಗಿ ಭಕ್ತಿರೂಪಾಪನ್ನವಾದ ಉಪಾಸನಾತ್ಮಕ ಜ್ಞಾನವೇ ವೇದಾಂತಪ್ರತಿಪಾದ್ಯವಾದ ಮೋಕ್ಷಸಾಧನವೆಂದು ಭಗವದ್ರಾಮಾನುಜಾಚಾರ್ಯರು ತಮ್ಮ ಶ್ರೀ ಭಾಷ್ಯಗ್ರಂಥದಲ್ಲಿ ವೇದಾಂತವಾಕ್ಯಗಳ ಆಧಾರದಿಂದಲೇ ಸಂಶಯಗಳಿಗೆ ಆಸ್ಪದವಿಲ್ಲದಂತೆ ಸ್ಥಾಪಿಸಿರುತ್ತಾರೆ. ಜ್ಞಾನಯೋಗಾಭ್ಯಾಸಕ್ಕಿಂತ ಭಕ್ತಿಯೋಗಾಭ್ಯಾಸವು ಸುಲಭ ಮತ್ತು ಶೀಘ್ರಪ್ರದವೆಂಬುದನ್ನು ಭಗವದ್ಗೀತೆಯ ಹನ್ನೆರಡನೆ ಅಧ್ಯಾಯದ ಮೊದಲಿನ ಏಳು

# ಸಪ್ತಗಿರಿ

**ಬರಹಗಾರರಿಗೆ ಸೂಚನೆ:**

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಹಿಂದೇ ಕಡೆ ಬರೆಯಲಾಗಿರಬೇಕು. ಟೈಪ್ ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು. ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಶ್ಲೋಕಗಳಲ್ಲಿ ವಿಶದವಾಗಿ ಹೇಳಿರುವುದು. ಇದರಿಂದ ಭಕ್ತಿ ಯೋಗವೇ ಸುಲಭವೂ ಶ್ರೇಷ್ಠವೂ ಶೀಘ್ರಫಲ ಪ್ರದವೂ ಆದ ಮಾರ್ಗವು.

ಕೇವಲ ಜ್ಞಾನಯೋಗದಿಂದ ಆತ್ಮಸಾಕ್ಷಾತ್ಕಾರ ರೂಪವಾದ ಮುಕ್ತಿಯು ಶರೀರಾವಸಾನಾನಂತರವೇ ದೊರಕುವುದೆಂದು ಹೇಳಿರುವುದು. ಶ್ರೀಭಾಷ್ಯಗ್ರಂಥದಲ್ಲಿ "ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯದಾಚ ..............." (4–3–14) ಎಂಬ ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ ಭಗವದ್ರಾಮಾನುಜಾಚಾರ್ಯರೂ ಮತ್ತು ಬಾದರಾಯಣರೂ (ಎಂದರೆ ವೇದವ್ಯಾಸ ಮಹರ್ಷಿಗಳೂ) ಜಿಜ್ಞಾಸುವೂ (ಎಂದರೆ ಜ್ಞಾನಯೋಗನಿಷ್ಠನಾದ ಆತ್ಮೋಪಾಸಕನೂ), ಮತ್ತು ಜ್ಞಾನಿಯೂ (ಎಂದರೆ ಭಕ್ತಿಯೋಗನಿಷ್ಠನಾದ ಪರಮಾತ್ಮೋಪಾಸಕನೂ) ತಮ್ಮ ಶರೀರಾವಸಾನಾನಂತರ ಅರ್ಚಿರಾದಿ ಮಾರ್ಗದಿಂದ ಪ್ರಯಾಣಮಾಡಿ ಪರಬ್ರಹ್ಮನನ್ನು ಸೇರುವರು ಎಂದು ಹೇಳಿರುವರು. ಈ ಮುಕ್ತಿಯು ಚತುರ್ಮುಖಬ್ರಹ್ಮನ ಲೋಕವಲ್ಲವೆಂದು ಹೇಳಿರುವುದು. ಅದನ್ನೇ ಅಪ್ರಾಕೃತವಾದ ದಿವ್ಯವೈಕುಂಠವೆಂದೂ ಅದು ಬ್ರಹ್ಮಾಂಡದ ಹೊರಗೆ ಪ್ರಕೃತಿ ಮಂಡಲದಿಂದ ಆಚೆ ಇರುವುದೆಂದೂ ಭಗವದ್ರಾಮಾನುಜಾಚಾರ್ಯರು ತಮ್ಮ ವೇದಾರ್ಥಸಂಗ್ರಹವೆಂಬ ಗ್ರಂಥದಲ್ಲಿ ಶ್ರುತೀತಿಹಾಸ ಪುರಾಣಗಳ ಆಧಾರದಿಂದ ಹೇಳಿರುವರು. ಇದರಿಂದ ಅದ್ವೈತ ಸಿದ್ಧಾಂತದಲ್ಲಿ ಹೇಳಿರುವಂತೆ ಜ್ಞಾನಯೋಗ ಸಾಧನೆಯಿಂದ ಈ ಶರೀರದಲ್ಲೇ ಈ ಬ್ರಹ್ಮಾಂಡದೊಳಗೇ ಮುಕ್ತಿಯನ್ನು ಪಡೆಯುವರು ಎಂಬುವುದನ್ನು ವಿಶಿಷ್ಟಾದ್ವೈತಸಿದ್ಧಾಂತವು ಒಪ್ಪುವುದಿಲ್ಲ. "ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ। ಮಾಮುಪೇತ್ಯತು ಕೌಂತೇಯ ಪುನರ್ಜನ್ಮನ ವಿದ್ಯತೇ॥ (ಭ.ಗೀ. 8–16) ಎಂಬ ಭಗವದ್ಗೀತಾ ಶ್ಲೋಕದ ಪೂರ್ವಾರ್ಧದಿಂದ ಬ್ರಹ್ಮಾಂಡವೊತ್ತವೂ ಸೃಷ್ಟಿಪ್ರಳಯಗಳಿಗೆ ಒಳಪಟ್ಟಿರುವುದರಿಂದ ಇದರೊಳಗಿರುವುದು ಶಾಶ್ವತ ಮುಕ್ತಿಯಾಗಲಾರದು ಎಂದೂ, ಉತ್ತರಾರ್ಧದಿಂದ ಪುನರ್ಜನ್ಮರಹಿತವಾದ ಮುಕ್ತಿಗೆ ಈ ಬ್ರಹ್ಮಾಂಡದ ಹೊರಗಿರುವ ವೈಕುಂಠದಲ್ಲಿರುವ ಪರಮಾತ್ಮನಲ್ಲಿ ಹೋಗಿ ಸೇರಬೇಕೆಂದೂ ಅರ್ಥಮಾಡಿ, ಜಿಜ್ಞಾಸುವಾದ ಜ್ಞಾನಯೋಗಿಯು ಶರೀರಾವಸಾನಾನಂತರ ವೈಕುಂಠಕ್ಕೆ ಹೋಗಿ ಕೈವಲ್ಯವೆಂಬ ಮುಕ್ತಿಸ್ಥಾನವನ್ನು ಸೇರುವನೆಂದೂ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಹೇಳಿರುವುದು. "ಅರ್ಚಿರಾದಿ" ಎಂಬ ಶ್ರೀವೈಷ್ಣವ ಗ್ರಂಥದಲ್ಲಿ ಈ ವಿಷಯವು ವಿಶದಪಡಿಸಿರುವುದು.

ಭಗವದ್ಗೀತೆಯಲ್ಲಿ ತನ್ನ ಉಪದೇಶವೆಲ್ಲವನ್ನೂ ಕೇಳಿದ ಅರ್ಜುನನು ಈ ಕರ್ಮಜ್ಞಾನ ಭಕ್ತಿ ಯೋಗಗಳ ಅಭ್ಯಾಸದಿಂದ ಮುಕ್ತಿಯನ್ನು ಸಾಧಿಸುವುದು, (ಇಂದ್ರಿಯಗಳನ್ನೂ ಮನಸ್ಸನ್ನೂ ಜಯಿಸುವುದು ಕಷ್ಟವಾದ್ದರಿಂದ) ಅಸಾಧ್ಯವಾದ ಕಾರ್ಯವೆಂದೂ, ಮತ್ತು ಜೀವಾತ್ಮನ ಯಾಥಾತ್ಮ್ಯಸ್ವರೂಪಕ್ಕೆ ವಿರೋಧವೆಂದೂ ಚಿಂತಿತನಾಗಿ ಶೋಕಿಸುತ್ತಿದ್ದುದನ್ನು ಗಮನಿಸಿ ಶ್ರೀಕೃಷ್ಣನು ಸುಲಭವಾದ ಶರಣಾಗತಿ ಮಾರ್ಗವನ್ನು "ಸರ್ವಧರ್ಮಾನ್ಪರಿತ್ಯಜ್ಯ, ಮಾಮೇಕಂ ಶರಣಂವ್ರಜ। ಅಹಂತ್ವಾ ಸರ್ವಪಾಪೇಭ್ಯೋ-ಮೋಕ್ಷಯಿಷ್ಯಾಮಿ ಮಾಶುಚಃ॥" (ಭ. ಗೀ. 18–66) ಎಂಬ ಶ್ಲೋಕದಿಂದ ಉಪದೇಶಿಸಿದನು. ಶ್ರೀವೈಷ್ಣವ ಆಚಾರ್ಯರುಗಳು ಈ ಶರಣಾಗತಿ ಯೋಗವನ್ನು ತಮ್ಮ "ರಹಸ್ಯತ್ರಯ" ವೆಂಬ ಗ್ರಂಥದಲ್ಲಿ ಬಹಳ ವಿಸ್ತಾರವಾಗಿಯೂ ವಿಶದವಾಗಿಯೂ ವಿವರಿಸಿರುವರು. ಹೀಗೆ ಭಗವದ್ಗೀತೆಯ ಉಪದೇಶವೆಲ್ಲವೂ ಉಭಯವೇದಾಂತವೆಂದು ಪ್ರಸಿದ್ಧವಾದ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಅಡಗಿರುವುದೆಂಬುವುದು ವ್ಯಕ್ತವಾಗುವುದು.

---

(18ನೇ ಪುಟದಿಂದ)

ಬಂಧು ಮೋಹ. ಆದಕ್ಕೆಂದೇ ಶ್ರೀಕೃಷ್ಣನ ಮೊರೆಹೊಕ್ಕಿದ್ದಾನೆ. ಪ್ರಾರ್ಥನೆ ಸಲ್ಲಿಸಿದ್ದಾನೆ ತನ್ನ ಅಳಲನ್ನು ತೋಡಿಕೊಂಡಿದ್ದಾನೆ. ಅಂತೆಯೆ ಶ್ರೀಕೃಷ್ಣ – ಪಾಂಡವಮಧ್ಯಮನ ಸಂಶಯಗಳಿಗೆ ಪ್ರಶ್ನೆಗಳಿಗೆ ಅಷ್ಟೇ ಸಮರ್ಪಕವಾಗಿ ಉತ್ತರಿಸಿದ್ದಾನೆ. ಅವನ ಇಬ್ಬಂದಿತನದ ತಾಕಲಾಟವನ್ನು ಹೋಗಲಾಡಿಸಿ ಅವನ ಕಲಿತನವನ್ನು ಅವನಿಗೇ ತಿಳಿಸಿಕೊಟ್ಟು ಜಾಗೃತಗೊಳಿಸಿದ್ದಾನೆ.

ಧರ್ಮಸಂಸ್ಥಾಪನಾಕಾರ್ಯದಲ್ಲಿ ಅವನದು ಮಹತ್ತ್ವದ ಪಾತ್ರವಿದೆ ಎಂಬ ತಿಳಿವಳಿಕೆ ಮೂಡಿಸಿದ್ದಾನೆ. ಆಧ್ಯಾತ್ಮಿಕ ಧಾರ್ಮಿಕ, ತಾತ್ತ್ವಿಕ ಸೂಕ್ಷ್ಮವಿಚಾರ ಧಾರೆ ಎರೆದು, ಅವನ ಬುದ್ಧಿವೃತ್ತಿಯನ್ನು ಪ್ರಚೋದಿಸಿದ್ದಾನೆ ಶ್ರೀಕೃಷ್ಣ.

ಇಲ್ಲಿ ಪಾರ್ಥನು ಇಡೀ ಮಾನವಕೋಟಿಯ ಪ್ರತಿನಿಧಿಯಾಗಿ ನಿಂತಿದ್ದಾನೆ ಎನ್ನುವುದನ್ನು ನಾವು ಗಮನಿಸಬೇಕಾದ ಮುಖ್ಯ ಅಂಶ.

(ಸಶೇಷ)



## ಪುಸ್ತಕವಿಮರ್ಶೆ

# ಯಶಸ್ವಿ ಅನುವಾದ ಕೃತಿ

ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ – ಸೈದ್ಧಾಂತಿಕ ಪ್ರಕರಣ ಪರಾಮರ್ಶೆ.

ಅನುವಾದಕರು:–ಆರ್. ಎಚ್. ಕುಲಕರ್ಣಿ

ಪ್ರಕಾಶಕರು: – ಸಾಹಿತ್ಯಸದನ ಗುಲ್ಬರ್ಗ

ಬೆಲೆ–ರೂ. 10-00

ಭಾರತದ ಪಶ್ಚಿಮ ಕರಾವಳಿಯಲ್ಲಿರುವ ಉಡುಪಿಯ ಸಮೀಪದಲ್ಲಿ ಜನ್ಮತಾಳಿದ ಮಧ್ವಾಚಾರ್ಯರಿಂದ ರಚಿಸಲ್ಪಟ್ಟ ಮಹಾಭಾರತದ ತಾತ್ಪರ್ಯನಿರ್ಣಯ ಗ್ರಂಥದ ಮೊದಲ ಮೂರು ಅಧ್ಯಾಯಗಳನ್ನು ಆರ್. ಎಚ್. ಕುಲಕರ್ಣಿಯವರು ಕನ್ನಡದಲ್ಲಿ ಅನುವಾದಿಸಿ ಆಯಾ ಅಧ್ಯಾಯಗಳ ಆರಂಭದಲ್ಲಿ ಪ್ರಸ್ತಾವನೆಯನ್ನೂ, ಅಂತ್ಯದಲ್ಲಿ ಸಾರಾಂಶವನ್ನೂ ಬರೆದು ಜಿಜ್ಞಾಸುಗಳಿಗೆ ಮಹೋಪಕಾರ ಮಾಡಿದ್ದಾರೆ.

ಶಾಸ್ತ್ರಜನ್ಯಜ್ಞಾನವು ಪೂರ್ಣತೆಯನ್ನು ಪಡೆದು ಪರಮಾತ್ಮನಲ್ಲಿ ಅವ್ಯಭಿಚರಿತವಾದ ಸ್ನೇಹವನ್ನು ಹುಟ್ಟಿಸುವುದೆಂದೂ, ಆ ವಿಶಿಷ್ಟ ಸ್ನೇಹವೇ ಭಕ್ತಿಯೆಂದೂ, ಅದೇ ಶ್ರೇಯಸ್ಸಾಧನವೆಂದೂ, ಸಿದ್ಧಾಂತಿಸಿದ ಶ್ರೀ ಮಧ್ವಾಚಾರ್ಯರು ಮಹಾಭಾರತದಲ್ಲಿ ತಲೆದೋರಬಹುದಾದ ಸಂದೇಹ, ಭ್ರಮೆ, ವಿಪರೀತಾರ್ಥಗಳನ್ನು ಪರಿಹರಿಸಿ ಅವುಗಳ ಯಥಾರ್ಥವಾದ ತಾತ್ಪರ್ಯವನ್ನು ಸ್ಪಷ್ಟಪಡಿಸಲು 'ಮಹಾಭಾರತ ತಾತ್ಪರ್ಯನಿರ್ಣಯ' ಗ್ರಂಥವನ್ನು ರಚಿಸಿದರು. ಈ ಗ್ರಂಥಕ್ಕೆ ಸಂಸ್ಕೃತ ಭಾಷೆಯಲ್ಲಿ ಆರು ವ್ಯಾಖ್ಯಾನಗಳಿವೆ. ಕನ್ನಡ, ಮರಾಠಿ, ತೆಲುಗು, ಇಂಗ್ಲಿಷ್ ಭಾಷೆಗಳಲ್ಲಿ ಅನೂದಿತಗಳಾದ ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥಗಳ ಆಧಾರದಿಂದ ಪ್ರಕೃತ ಗ್ರಂಥವನ್ನು ರಚಿಸಿರುವ ಕುಲಕರ್ಣಿಯವರು ಅನೇಕ ಲೌಕಿಕ ಯುಕ್ತಿಗಳಿಂದ ತತ್ತ್ವವಿಚಾರವನ್ನು ಸ್ಪಷ್ಟಗೊಳಿಸಿ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಈ ಗ್ರಂಥದ ಮೊದಲ ಅಧ್ಯಾಯ ವೇದಗಳು, ಪಂಚರಾತ್ರಾಗಮ, ಪುರಾಣಗಳು ಮೊದಲಾದವುಗಳಲ್ಲಿದ್ದ ವಿರೋಧವನ್ನು ಪರಿಹರಿಸಿ ಶ್ರೀ ನಾರಾಯಣನಿಗೆ ಗುಣಪರಿಪೂರ್ಣತ್ವಾದಿಗಳೇ ಸಕಲ ಶಾಸ್ತ್ರಾರ್ಥವೆಂದು ನಿರೂಪಿಸುತ್ತದೆ.

ಶ್ರೀಮನ್ನಾರಾಯಣನೇ ಸರ್ವೋತ್ತಮನು, ಬ್ರಹ್ಮಾದಿದೇವತೆಗಳಲ್ಲಿ ತಾರತಮ್ಯವಿದೆ–ಎಂಬಿವೇ ವಿಷಯಗಳನ್ನು ಇತಿಹಾಸ–ಪುರಾಣಾದಿಗಳಿಂದ ಸಮರ್ಥಿಸುತ್ತದೆ–ಎರಡನೆಯ ಅಧ್ಯಾಯ.

ಮೊದಲ ಎರಡೂ ಅಧ್ಯಾಯಗಳೂ ಪ್ರಮೇಯ ವಿಷಯಗಳನ್ನೊಳಗೊಂಡಿವೆಯೆಂದು ಅಭಿಜ್ಞರ ಅಭಿಪ್ರಾಯ.

ಸರ್ಗ–ಅನುಸರ್ಗ – ಪ್ರಾದುರ್ಭಾವಗಳ ನಿರೂಪಣೆ ತೃತೀಯಾಧ್ಯಾಯದ ವಿಷಯ.

ಮೊದಲನೆಯ ಅಧ್ಯಾಯದ ಪ್ರಸ್ತಾವನೆಯಲ್ಲಿ 'ಆಚಾರ್ಯರ ಪೂರ್ವದಲ್ಲಿ ಧಾರ್ಮಿಕ ಸ್ಥಿತಿ' ಎಂಬ ಶೀರ್ಷಿಕೆಯಡಿಯಲ್ಲಿ '(ಬ್ರಹ್ಮಸೂತ್ರಗಳಿಗೆ)...... ಸುಮಾರು 21 ಭಾಷ್ಯಗಳು ಸಿದ್ಧವಾಗಿದ್ದವು. ಯಾವುದಕ್ಕೂ ತಳಪಾಯವಿರಲಿಲ್ಲ. ಅವರು ವೇದಗಳಿಗೂ ಅಪಾರ್ಥ ಮಾಡಲು ಹಿಂಜರಿಯುತ್ತಿಲ್ಲ' ಎಂದು ಅನುವಾದಕರು ಹೇಳಿದ್ದಾರೆ. ಈ ಹೇಳಿಕೆ ಸತ್ಯದೂರವಾದುದು.

ಆಚಾರ್ಯರ 37 ಗ್ರಂಥಗಳ ಮಹಿಮೆಯೊಂದಿಗೆ 37 ಗ್ರಂಥಸಂಖ್ಯೆಯ ರಹಸ್ಯವನ್ನು ತಿಳಿಸುತ್ತ ಅನುವಾದಕರು 'ಮೂರರಲ್ಲಿ ಏಳು ಕಳೆದಾಗ ಉಳಿಯುವುದು ನಾಲ್ಕು ಮಾತ್ರ' (ಪು. 8) ಎಂದಿದ್ದಾರೆ. 'ಏಳರಲ್ಲಿ ಮೂರು ಕಳೆದಾಗ' ಎಂದಿರಬೇಕಿತ್ತು.

ಶ್ರೀಹರಿಯ ಸರ್ವೋತ್ತಮತ್ವವನ್ನು ತಾರತಮ್ಯದ ಮೂಲಕ ಸಿದ್ಧಪಡಿಸಲು ಕೊಟ್ಟಿರುವ ಲೌಕಿಕ ದೃಷ್ಟಾಂತ (ಪು. 9) ಪೇಲವವಾದರೂ, ಮನೋವಿಜ್ಞಾನದ ವೈಯಕ್ತಿಕ ಭಿನ್ನತೆಯ ದೃಷ್ಟಾಂತ (ಪು.11) ಸೊಗಸಾಗಿದೆ.

ಬಿಂಬ-ಪ್ರತಿಬಿಂಬದ ಮತ್ತು ಪಂಚಭೇದಗಳ ಆಧಾರವಾದ ಶ್ರೀಹರಿಯ ಸರ್ವೋತ್ತಮತ್ವವನ್ನು ತಮ್ಮ ಪ್ರಸ್ತಾವನೆಯಲ್ಲಿ ಶ್ರೀಹರಿಯು ಸರ್ವೋತ್ತಮನೆಂದು ಸಿದ್ಧಪಡಿಸಿದ್ದಾರೆ. ಮತ್ಸ್ಯ ಕೂರ್ಮಾವತಾರಗಳಲ್ಲಿ ಪರಸ್ಪರ ಭೇದವಿಲ್ಲವೆಂದೂ ಬ್ರಹ್ಮರುದ್ರಾದಿಗಳಲ್ಲಿ ಭಗವದಾವೇಶವಿದೆಯೆಂದೂ ಸ್ಪಷ್ಟಪಡಿಸುತ್ತ ಶ್ರೀ ಮಧ್ವಾಚಾರ್ಯರು ತಾರತಮ್ಯ ಮತ್ತು ಆವೇಶತತ್ತ್ವಗಳನ್ನು ಚೆನ್ನಾಗಿ ನಿರೂಪಿಸಿದ್ದಾರೆ.

ಮಹಾಭಾರತದ ಸರಿಯಾದ ಅವಗಾಹನೆ ಸಕಲ ಪಾಪ ನಿವಾರಕವೆಂದು ದ್ವಿತೀಯಾಧ್ಯಾಯವನ್ನು ಪ್ರಾರಂಭಿಸಿರುವ ಆಚಾರ್ಯರು ದೇವತೆಗಳಲ್ಲಿ ತಾರತಮ್ಯವಿದೆಯೆಂದು ಸ್ಪಷ್ಟ ಚೆನ್ನಾಗಿ ನಿರೂಪಿಸಿರುವ ಅನುವಾದಕರು ಮೂಲಸಂಸ್ಕೃತ ಶ್ಲೋಕಗಳಿಗೆ ಕನ್ನಡದಲ್ಲಿ ಅರ್ಥವನ್ನು ವಿವರಿಸಿ ಅಲ್ಲಲ್ಲಿ ವಿಶೇಷ ವಿಷಯಗಳನ್ನು ತಿಳಿಸಿದ್ದಾರೆ.

26 ಮತ್ತು 67 ನೇ ಪುಟಗಳಲ್ಲಿ "ಮುಷ್ಟಿ ಸೃಷ್ಟಿ" ಎಂದು ಬರೆದಿದ್ದಾರೆ. 'ವ್ಯಷ್ಟಿ ಸೃಷ್ಟಿ' ಎಂದಿರಬೇಕು.

'ಸುವಾಕ್ಯೋದ್ಧರಣ' ವೆಂಬ ಎರಡನೆಯ ಅಧ್ಯಾಯದಲ್ಲಿ ಮಹಾಭಾರತದಿಂದ ಅನೇಕ ವಾಕ್ಯಗಳನ್ನು ಉದ್ಧರಿಸಿ ಆಚಾರ್ಯರು

ಶ್ರೀ ಲಕ್ಷ್ಮೀ ನರಸಿಂಹಭಟ್ಟ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು

**ಸಂಪಾದಕರು,**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

ಪಡಿಸಿದ್ದಾರೆ. ಶ್ರೀಹರಿಯ ತರುವಾಯ ಬ್ರಹ್ಮನಾಯು ಅಧಿಕರು. ಅನಂತರ ಶೇಷ ರುದ್ರಾದಿಗಳು. ಈ ತತ್ತ್ವವನ್ನು ಭಾರತದಲ್ಲಿ ಶ್ರೀಕೃಷ್ಣಭೀಮರ ನಿದರ್ಶನದಿಂದ ಸ್ಪಷ್ಟಪಡಿಸಲಾಗಿದೆ. ವಾಯುವೇ ಭೀಮನಾಗಿ ಅವತರಿಸಿ ಶ್ರೀಕೃಷ್ಣ ಕಾರ್ಯದಲ್ಲಿ ಕೈಂಕರ್ಯವೆಸಗಿದನು. ರಾಮಕೃಷ್ಣಾದ್ಯವತಾರಗಳಲ್ಲಿ ಭೇದವಿಲ್ಲವೆಂದು ಹೇಳಿ, ಶ್ರೀಮದಾಚಾರ್ಯರು ಭಗವದಾವೇಶವುಳ್ಳ ಬ್ರಹ್ಮ ರುದ್ರ–ಶೇಷ-ಗರುಡಾದಿಗಳನ್ನು ಕ್ರಮವಾಗಿ ಪಟ್ಟಿಮಾಡಿ ಅವರ ತಾರತಮ್ಯವನ್ನು ವಿಶದೀಕರಿಸಿದ್ದಾರೆ. ಮಹಾಭಾರತದಲ್ಲಿ ಸಮಾಧಿ, ದರ್ಶನ ಮತ್ತು ಗುಹ್ಯ ಎಂಬ ಮೂರು ಭಾಷೆಗಳನ್ನು ಬಳಸಲಾಗಿದೆಯೆಂದಿರುವ ಆಚಾರ್ಯರು ಅವುಗಳ ಲಕ್ಷಣಗಳನ್ನು ಹೇಳಿ, ಇವುಗಳನ್ನು ಗುರುಮುಖದಿಂದ ಅರಿತಾಗಲೇ ಭಾರತದ ಅರ್ಥ ಸರಿಯಾಗಿ ತಿಳಿಯಬಲ್ಲರು ಎಂದಿದ್ದಾರೆ. ಪರಬ್ರಹ್ಮನ ಮಾಹಾತ್ಮ್ಯವನ್ನು ಉಪಪಾದಿಸುವ ದ್ವಿತೀಯಾಧ್ಯಾಯದ ಪ್ರಸ್ತಾವನೆ ಶ್ಲೋಕಾನುವಾದ, ಸಾರಾಂಶಗಳು ಚೆನ್ನಾಗಿವೆ.

ಸರ್ಗ - ಅನುಸರ್ಗ - ಪ್ರಾದುರ್ಭಾವ ನಿರ್ಣಯಪರವಾದ ತೃತೀಯಾಧ್ಯಾಯ ಪರಬ್ರಹ್ಮನಿಂದ ಜಗತ್ಸೃಷ್ಟಿ, ತತ್ತ್ವಸೃಷ್ಟ್ಯಾದಿ ವಿಷಯಗಳನ್ನು ನಿರೂಪಿಸುತ್ತದೆ. ಸ್ಥೂಲ ಸೃಷ್ಟಿಗೂ ಬ್ರಹ್ಮ ಸೃಷ್ಟಿಗೂ ವ್ಯತ್ಯಾಸವನ್ನು ಆಚಾರ್ಯರು ಸೂಕ್ಷ್ಮವಾಗಿ ತೋರಿಸಿದ್ದಾರೆ. ಮತ್ಸ್ಯಾದ್ಯವತಾರಗಳ ಚರಿತ್ರೆಗೂ ಸೃಷ್ಟಿಯ ಉಪಕ್ರಮಕ್ಕೂ ಹೊಂದಾಣಿಕೆಯಿದೆಯೆಂದೊಪ್ಪುವ ವಿಜ್ಞಾನಿಗಳ ವಿಚಾರಗಳನ್ನು ಅನುವಾದ ಮಾಡಿ ಕುಲಕರ್ಣಿಯವರು ತೃತೀಯಾಧ್ಯಾಯದ ಪ್ರಸ್ತಾವನೆಯಲ್ಲಿ ಖಂಡಿಸಿರುವ ಬಗೆ ಮೆಚ್ಚುವಂಥದು.

ಸರ್ವನಿಯಾಮಕನಾದ ಬ್ರಹ್ಮ ಸರ್ವಕರ್ತೃ, ಅವನನ್ನುಳಿದು ಮತ್ತೊಂದಕ್ಕೆ ಕರ್ತೃತ್ವವಿಲ್ಲವೆಂಬ ಮಧ್ವಸಿದ್ಧಾಂತ ತೃತೀಯಾಧ್ಯಾಯದಲ್ಲಿ ನಿರೂಪಿತಗೊಂಡಿದೆ. ಶುದ್ಧಸೃಷ್ಟ್ಯಾದಿಗಳ ನಿರೂಪಣೆಯನ್ನು ಕಂಡಾಗ, ಶ್ರೀ ಮದಾಚಾರ್ಯರು ಪಂಚರಾತ್ರ ಶಾಸ್ತ್ರದಿಂದ ವಿಶೇಷ ಪ್ರಭಾವಿತರಾಗಿರುವರೆಂದು ತಿಳಿಯುತ್ತದೆ.

ವಿಷ್ಣುವೇ ಪರಬ್ರಹ್ಮ. ಅವನ ಸರ್ವಕರ್ತೃತ್ವಕ್ಕೆ ಅನುಕೂಲಿಸುವಂತೆ ವೇದ–ಪಂಚರಾತ್ರ – ಪುರಾಣಾದಿ ವಾಕ್ಯಗಳನ್ನು ವ್ಯಾಖ್ಯಾನ ಮಾಡಿ ಸ್ವತಂತ್ರಬ್ರಹ್ಮನೇ ಸರ್ವಕ್ಕೂ ಮೂಲ ಎಂಬ ತಮ್ಮ ಸಿದ್ಧಾಂತವನ್ನು ಮಧ್ವಾಚಾರ್ಯರು 'ಮಹಾಭಾರತ ತಾತ್ಪರ್ಯ ನಿರ್ಣಯ' ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ. ಆಚಾರ್ಯರ ಈ ಗ್ರಂಥ ವ್ಯಾಖ್ಯಾಸಾಪೇಕ್ಷವಾದುದು. ಸಕಲರಿಗೆ ಸುಲಭವಾಗಿ ಅರ್ಥವಾಗಲಾರದು. ಆಚಾರ್ಯರ ಹೃದಯವನ್ನರಿಯುವುದು ಕಷ್ಟಸಾಧ್ಯ. ಈ ಕಾರ್ಯದಲ್ಲಿ ಅನುವಾದಕರಾದ ಕುಲಕರ್ಣಿಯವರು ಯಶಸ್ವಿಯಾಗಿದ್ದಾರೆ. ಮೊದಲ ಮೂರು ಅಧ್ಯಾಯಗಳ ಅನುವಾದ ಮಾಡಿ ಜಿಜ್ಞಾಸುಗಳಿಗೆ ಉಪಕರಿಸಿದಂತೆ ಉಳಿದ 29 ಅಧ್ಯಾಯಗಳ ಅನುವಾದವನ್ನೂ ಕುಲಕರ್ಣಿಯವರಿಂದ ನಿರೀಕ್ಷಿಸುತ್ತೇವೆ. ಶ್ಲೋಕಾನುವಾದ ಮತ್ತು ಸಾರಾಂಶಗಳ ಹಲವು ವಾಕ್ಯಗಳಲ್ಲಿ 'ಪುನರುಕ್ತಿ' ಸಹೃದಯರಿಗೆ ವೈರಸ್ಯವುಂಟುಮಾಡುತ್ತದೆ. ಈ ದೋಷವನ್ನು ದೂರೀಕರಿಸಲು ಯತ್ನಿಸಲೆಂದು ಹೇಳದಿರಲಾರೆವು.

(14ನೇ ಪುಟದಿಂದ)

ಅಹೋಬಲದಲ್ಲಿ ವಸತಿ ಸೌಕರ್ಯವೂ ಕಡಿಮೆ. ಅಹೋಬಲ ಮಠದಲ್ಲಿ ಸ್ಥಳ ದೊರೆಯುವುದು.

ಬೆಟ್ಟಗುಡ್ಡಗಳ ಹಾಗೂ ಅರಣ್ಯಗಳ ನಡುವೆ ಈ ಕ್ಷೇತ್ರವಿದೆ. ನಲ್ಲಮಲೈ ಪರ್ವತ ಶ್ರೇಣಿಯ ತಲೆಯ ಭಾಗವೇ ತಿರುಪತಿ, ಅಹೋಬಿಲವೇ ಶರೀರ, ಶ್ರೀಶೈಲವೇ ಅದರ ಬಾಲ. ಬೆಟ್ಟಗುಡ್ಡಗಳ ನಡುವೆ ಸೇರಿ ಕೊಂಡಿರುವ ಕ್ಷೇತ್ರಗಳ ಸಮುದಾಯವೆ ಅಹೋಬಿಲ. ದೈಹಿಕ ಶಕ್ತಿ ಚನ್ನಾಗಿರುವವರು ಮಾತ್ರ ಈ ಕ್ಷೇತ್ರಕ್ಕೆ ಹೋಗಲು ಸಾಧ್ಯ. ಏಕೆಂದರೆ ಇಲ್ಲಿನ ಒಂದು ಕ್ಷೇತ್ರ ದಿಂದ ಇನ್ನೊಂದು ಕ್ಷೇತ್ರಕ್ಕೆ ಹೋಗ ಬೇಕಾದರೆ ಕಾಲುದಾರಿಗಳಲ್ಲಿ ಬೆಟ್ಟಗುಡ್ಡಗಳನ್ನು ಹತ್ತಿ ಇಳಿದು ಹೋಗಬೇಕಾಗುತ್ತದೆ.

ಈ ಕ್ಷೇತ್ರಕ್ಕೆ ಸಂಬಂಧ ಪಟ್ಟಹಾಗೆ ಅನೇಕ ಅನೇಕ ಪೌರಾಣಿಕ ಕಥೆಗಳಿವೆ–ಗರುಡನು ತಪಸ್ಸು ಮಾಡಿದ ಜಾಗ, ರಾಕ್ಷಸರಿಂದ ವೇದಗಳನ್ನು ರಕ್ಷಿಸಿದುದು, ಕಂಭದಿಂದ ಹೊರಬಂದ ನರಸಿಂಹನು ಹಿರಣ್ಯ ಕಶಿಪುವನ್ನು ಸಂಹರಿಸಿ ಪ್ರಹ್ಲಾದನನ್ನು ರಕ್ಷಿಸಿದುದು–ಇತ್ಯಾದಿ. ಆಧುನಿಕ ಯಾಂತ್ರಿಕ ಯುಗದ ಶಬ್ದ ಮಾಲಿನ್ಯದಿಂದ ದೂರವಾಗಿ, ಇಲ್ಲಿನ ಸುತ್ತಾಟದಲ್ಲಿ ನಾವು ಕೃತ, ತ್ರೇತಾ, ದ್ವಾಪರಯುಗದಲ್ಲಿದ್ದೇವೆ ಎಂದು ಭ್ರಮಿಸಿ ಕೊಂಡರೆ ಆಶ್ಚರ್ಯವಿಲ್ಲ.

ಗರುಡಾದ್ರಿ ಹಾಗೂ ವೇದಾಚಲಗಳ ನಡುವೆ ಈ ಕ್ಷೇತ್ರವು ಹರಡಿದೆ. ತಪ್ಪಲಿನಲ್ಲಿ ಕೆಳ ಅಹೋಬಿಲ ಬೆಟ್ಟದ ಮೇಲೆ ಮೇಲ್ ಅಹೋಬಿಲವಿದೆ. ಇಲ್ಲಿನ ಎಲ್ಲ ದೇವಾಲಯಗಳೂ ಮೂರು ಪ್ರಾಕಾರಗಳ ನಡುವೆ ಇವೆ ಇಲ್ಲಿ ನರಸಿಂಹಸ್ವಾಮಿಯು ಒಟ್ಟು ಒಂಬತ್ತು ಮೂರ್ತಿಗಳಾಗಿ ನೆಲೆಸಿದ್ದಾನೆ ಎನ್ನುವ ನಂಬಿಕೆ.

ಕೆಳ ಅಹೋಬಿಲದಲ್ಲಿ ಮೂಲ ಮೂರ್ತಿ ಲಕ್ಷ್ಮೀ ನರಸಿಂಹ ವಿದೆ. ನರಸಿಂಹರು ಶಾಂತಿ ಮೂರ್ತಿಯಾಗಿ ಲಕ್ಷ್ಮೀಸಮೇತನಾಗಿ ಚತುರ್ಭುಜ ಯುತರಾಗಿ ಆಸೀನ ರಾಗಿದ್ದಾರೆ. ಇದನ್ನು ಪ್ರಹ್ಲಾದ ನರಸಿಂಹ ಎಂದೂ ಕರೆಯುತ್ತಾರೆ. ಇಲ್ಲಿನ ನೂರು ಕಾಲು ಮಂಟಪವನ್ನು ವಿಜಯನಗರದ ಕೃಷ್ಣ ದೇವರಾಯನು ಕಟ್ಟಿಸಿದನು. ಇಲ್ಲಿನ ಕಂಭಗಳು ಬೃಹದಾಕಾರವಾಗಿವೆ. ಇಲ್ಲಿನ ನವನಾರಸಿಂಹರ ವಿಗ್ರಹಗಳು, ಚೆಂಚು ಲಕ್ಷ್ಮಿಯ ಸಮೇತದ ನರಸಿಂಹರ ವಿಗ್ರಹ, ದಿವ್ಯಕ್ಷೇತ್ರಗಳ ಗೋಪುರ ಚಿತ್ರಗಳೂ ನೋಡಲು ಯೋಗ್ಯವಾದುವು. ಈ ದೇವಾಲಯದ ವಾಯುವ್ಯದಲ್ಲಿ ಶ್ರೀನಿವಾಸ ಪದ್ಮಾವತಿ ಕಲ್ಯಾಣ ಮಂಟಪವಿದೆ. ಮೂಲದೇವಾಲಯದ ಎಡ ಪಕ್ಕದಲ್ಲಿ ಅಮೃತವಲ್ಲಿ ನಾಚ್ಚಿಯಾರ್ ಸನ್ನಿಧಿಯಿದೆ. ಈ ಪ್ರದೇಶವನ್ನೆಲ್ಲ 'ಗಂಧಾದ್ರಿ' ಎನ್ನುತ್ತಾರೆ.

ಪ್ರಹ್ಲಾದ ನರಸಿಂಹ ದೇವಾಲಯದ ಈಶಾನ್ಯಕ್ಕೆ ಒಂದೂವರೆ ಮೈಲಿ ದೂರದಲ್ಲಿ ಭಾರ್ಗವ ನರಸಿಂಹ ದೇವಾಲಯವಿದೆ. ಸ್ವಲ್ಪದೂರದಲ್ಲಿ ಅಕ್ಷಯತೀರ್ಥವಿದೆ. ಇದನ್ನು (ಗರುಡಾದ್ರಿ) ಎಂದು ಕರೆಯುತ್ತಾರೆ.

ಪ್ರಹ್ಲಾದ ನರಸಿಂಹ ದೇವಾಲಯದ ಪೂರ್ವಕ್ಕೆ ಒಂದೂವರೆ ಮೈಲಿ ದೂರದಲ್ಲಿ ಛತ್ರವಟ ನರಸಿಂಹ ದೇವಾಲಯವಿದೆ. ಸುತ್ತಲೂ ತುಂಬಾ ಹುತ್ತಗಳಿವೆ ದೇವರು ಛತ್ರವಟದ ಕೆಳಗಿದ್ದಾರೆ.

ಕೆಳಗಿನ ಅಹೋಬಿಲದಿಂದ ಮೇಲಿನ ಅಹೋಬಿಲಕ್ಕೆ ಹೋಗುವ ದಾರಿಯಲ್ಲಿ, ಸುಮಾರು ಐದು ಮೈಲಿದೂರದಲ್ಲಿ ಕಾರಂಜಿ ವೃಕ್ಷದ ಕೆಳಗೆ ಭವನಾಶಿನೀ ನದೀ ತೀರದಲ್ಲಿ ಕಾರಂಜಿ ನರಸಿಂಹರ ಸನ್ನಿಧಿ ಇದೆ.

ಮೇಲಿನ ಅಹೋಬಿಲದಲ್ಲಿ ಒಂದು ಗುಹೆಯಲ್ಲಿ ಸ್ವಯಂವ್ಯಕ್ತ ಮೂರ್ತಿಯಾಗಿ ಉಗ್ರ ನರಸಿಂಹರ ಮೂರ್ತಿ ಇದೆ. ನವ ನಾರಸಿಂಹರಲ್ಲಿ ಇವರೇ ಪ್ರಧಾನರು. ಮೂರ್ತಿಯು ಹಿರಣ್ಯ ಕಶಿಪುವನ್ನು ಸಂಹಾರ ಮಾಡುವ ಭಂಗಿಯಲ್ಲಿದೆ.ಗುಹೆಯ ಮುಂದೆ ಮಂಟಪ, ಸುತ್ತಲೂ ದೇವಾಲಯದ ಪ್ರಾಕಾರವೂ ಗೋಪುರಗಳೂ ಇವೆ. ಇದರ ಬಲ ಭಾಗದಲ್ಲಿ ಚೆಂಚು ಲಕ್ಷ್ಮೀ ತಾಯಾರ್‌ರವರ ಸನ್ನಿಧಿಯಿದೆ. ಇಲ್ಲಿನ ಬ್ರಹ್ಮೋತ್ಸವದ ಸಮಯದಲ್ಲಿ ಚೆಂಚು ಜಾತಿಯ ಬೇಡರ ಸೇವೆ ಇದೆ. ಇದನ್ನೇ ಅಹೋಬಿಲ ನರಸಿಂಹ ಎನ್ನುವುದು. ಇಲ್ಲಿಗೆ ತಿರುಮಂಗೈ ಆಳ್ವಾರ್, ಶ್ರೀರಾಮಾನುಜಾಚಾರ್ಯರು ಶ್ರೀ ದೇಶಿಕರು, ಶ್ರೀ ಕೃಷ್ಣ ಚೈತನ್ಯರು, ದಯಮಾಡಿಸಿ, ಮಂಗಳಾಶಾಸನ ಮಾಡಿದ್ದಾರೆ. ಇಲ್ಲಿಂದ ಅರ್ಧ ಫರ್ಲಾಂಗ್ ದೂರದಲ್ಲಿ ಆದಿವಣ್ ಶಠಗೋಪ ಸ್ವಾಮಿಯವರು ಕಾಲಕ್ಷೇಪ ಮಾಡುತ್ತಿದ್ದ 124 ಕಂಭಗಳ ದೊಡ್ಡ ಮಂಟಪವಿದೆ. ಇಲ್ಲಿಂದ ಎರಡು ಫರ್ಲಾಂಗ್ ದೂರದಲ್ಲಿ ಕಾಡು ಮೇಡುಗಳನ್ನು ದಾಟಿ ಹೋದರೆ ವರಾಹ ನರಸಿಂಹರ ಸನ್ನಿಧಿಯು, ಅದರ ಎದುರುಗಡೆ ಸರ್ವಪಾಪ ಪರಿಹಾರಿಣಿಯಾದ ವರಾಹಕುಂಡವೂ ಇವೆ.

ವರಾಹ ನರಸಿಂಹ ಕ್ಷೇತ್ರದಿಂದ ಭವನಾಶಿನೀ ತೀರಕ್ಕೆ ಬಂದು ಅಲ್ಲಿಂದ ಗುಡ್ಡಗಳನ್ನು ಹತ್ತಿ, ಕಾಡಿನ ಮಾರ್ಗದಲ್ಲಿ ಒಂದು ಮೈಲಿ ದೂರ ಹೋದರೆ ವೇದಾದ್ರಿಯ ಶಿಖರದ ಮೇಲೆ ಮಟ್ಟವಾದ ಪ್ರದೇಶದಲ್ಲಿ ಮಾಲೋಲ ನರಸಿಂಹ ಸ್ವಾಮಿಯ ಸನ್ನಿಧಿಯಿದೆ. ಇದನ್ನು ಲಕ್ಷ್ಮೀಕ್ಷೇತ್ರವೆಂದೂ ಕರೆಯುತ್ತಾರೆ. ಮಾಲೋಲ ಎಂದರೆ ಲಕ್ಷ್ಮೀಲೋಲ ಎಂದರ್ಥ. ಇಲ್ಲಿನ ಸ್ವಾಮಿಯು ಲಕ್ಷ್ಮಿಯನ್ನು ಆಲಿಂಗಿಸಿ ಕೊಂಡು ಪರಸ್ಪರ ವೀಕ್ಷಿಸುತ್ತಿರುವುದಲ್ಲದೆ ಭಕ್ತರ ಕಡೆಯೂ ಕಟಾಕ್ಷ ವೀಕ್ಷಣ ಮಾಡುತ್ತಿದ್ದಾರೆ.

ವರಾಹ ನರಸಿಂಹ ಸ್ವಾಮಿ ದೇವಾಲಯದಿಂದ ಈಶಾನ್ಯಕ್ಕೆ ಮೂರು ಮೈಲಿ ದೂರದಲ್ಲಿ ಕಡಿದಾದ ಬೆಟ್ಟವನ್ನು ಹತ್ತಿ ಹೋದರೆ ವೇದಾಚಲ ಗರುಡಾಚಲಗಳು ಕೂಡುವ ಕಡೆಯಲ್ಲಿ 'ಅಚಲಛಾಯಾ ಮೇರು'ವಿನಲ್ಲಿ ಜ್ವಾಲಾನರಸಿಂಹ ಸ್ವಾಮಿಯ ಗುಹೆಯಿದೆ. ಅಷ್ಟ ಭುಜಗಳಿಂದ ಕೂಡಿ ಹಿರಣ್ಯ ಕಶಿಪುವನ್ನು ಸಂಹಾರ ಮಾಡಿದ ಭಂಗಿಯಲ್ಲಿ ಇಲ್ಲಿನ ಮೂರ್ತಿಯಿದೆ. ತುಂಬಾ ಅದ್ಭುತವಾಗಿದೆ. ರಾಕ್ಷಸ ಸಂಹಾರದ ನಂತರ ತಮ್ಮ ರಕ್ತ ರಂಜಿತ ಕೈಗಳನ್ನು ಎದುರುಗಡೆಯ ಸರೋವರದಲ್ಲಿ ತೊಳೆದಿದ್ದರಿಂದ ಅದಕ್ಕೆ ರಕ್ತ ಕುಂಡ ಎಂಬ ಹೆಸರು ಬಂದಿತಂತೆ. ಇದರ ನೀರು ಸದಾ ಕೆಂಪಗಿರುತ್ತದೆ. ಇಲ್ಲಿ, ಭೂತ ಪ್ರೇತಗಳಿಂದ ವಿಮೋಚನೆಯಾಗುವುದರಿಂದ ಇದನ್ನು 'ಮುಕ್ತಿ ಕ್ಷೇತ್ರ' ಎಂದು ಕರೆಯುತ್ತಾರೆ..........ಮೇಲಿನ ಅಹೋಬಿಲದಿಂದ ಪೂರ್ವಕ್ಕೆ ನಾಲ್ಕು ಮೈಲಿ ದೂರದಲ್ಲಿ ದುರ್ಗಮ ಹಾದಿಯನ್ನು ಹಾಯ್ದು ಹೋದರೆ ಕಡಿದಾದ ಶಿಬಿರದ ಮೇಲೆ ಉಕ್ಕಿನ ಉಗ್ರಸ್ತಂಭವೊಂದನ್ನು ನೋಡಬಹುದು.

ಮೇಲಿನ ಅಹೋಬಿಲ ದಿಂದ ಸುಮಾರು ನಾಲ್ಕು ಮೈಲಿ ದಕ್ಷಿಣಕ್ಕೆ ದುರ್ಗಮ ಕಾಡು ದಾರಿಯಲ್ಲಿ ಪಾವನ ನರಸಿಂಹ ಸ್ವಾಮಿ ಸನ್ನಿಧಿ ಇದೆ.

ಅಹೋಬಿಲಕ್ಕೆ ಹೋಗಿ ಬರುವುದು ಒಂದು ಅಪರೂಪ ಹಾಗೂ ಅದ್ಭುತ ಅನುಭವ.

## ದ್ವಾರಕ

ಇದನ್ನು ತಾವರೈ ಎಂದೂ ಕರೆಯುತ್ತಾರೆ. ಇಲ್ಲಿಗೆ ಕೆಲವರು ಸಮುದ್ರ ಮಾರ್ಗದಲ್ಲೂ ಹೋಗುವುದುಂಟು. ಆದರೆ ಸಾಮಾನ್ಯವಾಗಿ ಅಹಮದಾಬಾದ್ ಮುಖಾಂತರ ಪೋರ್ ಬಂದರನ್ನು ತಲುಪಬಹುದು. ಇದು ಹಿಂದಿನ ಕುಚೇಲ ಪಟ್ಟಣ ಅಥವಾ ಸುಧಾಮ ಪುರಿ. ಕುಚೇಲ ಸ್ವಾಮಿ ಸನ್ನಿಧಿ ಇದೆ. ಇಳಿದು ಕೊಳ್ಳಲು ವಸತಿ ಸೌಲಭ್ಯಗಳಿವೆ. ಇಲ್ಲಿಂದ 55 ಮೈಲಿ ದೂರದಲ್ಲಿ ದ್ವಾರಕೆಯು ಇದೆ. ಈಗ ಇಲ್ಲಿ ಎಲ್ಲ ಸೌಲಭ್ಯಗಳೂ ದೊರೆಯುತ್ತವೆ. ಬಳಿಯಲ್ಲಿ ಒಂದು ರಾಮಾನುಜ ಕೂಟವಿದೆ. ವಸತಿ ಸೌಲಭ್ಯಗಳು ಇನ್ನೂ ಬೇಕಾದಷ್ಟಿವೆ. ಗೋಮುಖೀ ನದಿಯು ಸಮುದ್ರವನ್ನು ಸೇರುವ ಕಡೆಯಲ್ಲಿ ಶ್ರೀಕೃಷ್ಣ ದೇವಾಲಯವಿದೆ. ಇತ್ತೀಚೆಗೆ

ಪ್ರಾಚೀನ ದ್ವಾರಕೆ, ದ್ವಾರಕಾಧೀಶನ ಅವಶೇಷಗಳನ್ನು ಕಂಡು ಹಿಡಿದಿದ್ದಾರೆ. ಸಮುದ್ರತಳದಲ್ಲಿ ಪ್ರಾಚೀನ ದ್ವಾರಕೆಯ ಅವಶೇಷಗಳು ಇರುವುದನ್ನು ಕಂಡು ಹಿಡಿದಿದ್ದಾರೆ.

ಈ ಕ್ಷೇತ್ರದ ಪ್ರಭಾವವೆಂದರೆ ಕಲ್ಯಾಣ ನಾರಾಯಣ, ಕಲ್ಯಾಣ ನಾಚ್ಚಿಯಾರ್, ಅಷ್ಟ ಮಹಿಷಿಯರು, ಹೇಮಕೂಟ ವಿಮಾನ, ಗೋಮತೀ ತೀರ್ಥ, ನಿಂತಸನಿಲುವು, ಪಶ್ಚಿಮಾಭಿಮುಖ, ದ್ರೌಪತಿಗೆ ಪ್ರತ್ಯಕ್ಷ. ತಿರುಮಂಗೈ ಆಳ್ವಾರ್ ಅಂಡಾಳ್, ಪೆರಿಯಾಳ್ವಾರ್, ನಮ್ಮಾಳ್ವಾರ್ ಹಾಗೂ ತಿರುಮಳಿಶೈ ಆಳ್ವಾರ್ ರವರುಗಳು ಇಲ್ಲಿ ಮಂಗಳಾ ಶಾಸನ ಮಾಡಿದ್ದಾರೆ.

## ಅಯೋಧ್ಯಾ

ದ್ವಾರಕಾದಿಂದ ಅಹಮದಾಬಾದ್ ಮುಖಾಂತರ ದೆಹಲಿಗೆ ಹೋಗಿ, ಅಲ್ಲಿಂದ ಲಕ್ನೋ ತಲುಪಿ, ಅಲ್ಲಿಂದ ಫೈಜಾಬಾದ್, ನಂತರ ಅಯೋಧ್ಯೆಯನ್ನು ತಲುಪಬಹುದು. ಇದು ಸರಯೂ (ಸೂರ್ಯ, ಘಾಗ್ರಾ) ನದಿಯ ದಡದ ಮೇಲಿದೆ. ಇಲ್ಲಿ ಅನೇಕ ಧರ್ಮ ಶಾಲೆಗಳಿರುವುದರಿಂದ ವಸತಿ ಸೌಕರ್ಯ ಚೆನ್ನಾಗಿದೆ. ಸರಯೂ ನದಿಯಲ್ಲಿ ಸ್ನಾನ ಮಾಡಿ ಇಲ್ಲಿ ಪುಣ್ಯಸ್ಥಳಗಳನ್ನು ದರ್ಶಿಸಬಹುದು. ಅಯೋಧ್ಯೆಯನ್ನು ಪ್ರವೇಶಿಸುತ್ತಲೇ ಹನುಮಾನ್ ಗರ್ಹಿ (ಸನ್ನಿಧಿ) ಕಂಡು ಬರುತ್ತದೆ. ಇಲ್ಲಿಯ ಗರ್ಭ ಗೃಹದ ಬಾಗಿಲಿನ ಚೌಕಟ್ಟು ಬೆಳ್ಳಿಯಿಂದ ನಿರ್ಮಾಣವಾಗಿದೆ. ಹನುಮಂತನ ತಲೆಯ ಮೇಲೆ ಬೆಲೆಬಾಳುವ, ಪ್ರಕಾಶಮಾನವಾದ ಪುಷ್ಯರಾಗದ ಕಲ್ಲಿದೆ. ಇಲ್ಲಿ ಕೋತಿಗಳ ಕಾಟ ಹೆಚ್ಚು ನಂತರ ಕನಕ ಭವನ, ರಾಮನ ಜನ್ಮಸ್ಥಳ, ಅಮ್ಮಾಜಿ ಮಂದಿರ, ರಾಮನು ತನ್ನ ಅವತಾರವನ್ನು ಪೂರೈಸಿದ ಗುಪ್ತಘಾಟ್, ಆಂಜನೇಯನ ಬೃಹದಾಕಾರ ಮೂರ್ತಿಯನ್ನು ಹೊಂದಿರುವ ಹನುಮಾನ್ ತೇಕ್ರ ಇತ್ಯಾದಿ ಅನೇಕ ಸ್ಥಳಗಳನ್ನು ದರ್ಶಿಸಬಹುದು. ಅಯೋಧ್ಯೆಯು ತುಂಬಾ ವಿಸ್ತಾರವಾದ ನಗರವಾಗಿತ್ತು.

ಇಲ್ಲಿನ ಪ್ರಭಾವವೆಂದರೆ ಶ್ರೀರಾಮ, ಚಕ್ರವರ್ತಿ ತಿರುಮಗನ್, ರಘುನಾಯಕ, ಸೀತಾದೇವಿ, ಪುಷ್ಕಲ ವಿಮಾನ, ಪರಮಪದ ಸತ್ಯ ಪುಷ್ಕರಿಣಿ, ಸರಯೂ ನದಿ, ರಾಮತೀರ್ಥ ಇತ್ಯಾದಿ ತೀರ್ಥ ಕುಂಡಗಳು, ಪೂರ್ವಾಭಿಮುಖ ನಿಂತ ನಿಲುವು, ಭರತನಿಗೆ, ದೇವತೆಗಳಿಗೆ, ಋಷಿಗಳಿಗೆ ಪ್ರತ್ಯಕ್ಷ. ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ತಿರುಮಂಗೈ ಆಳ್ವಾರ್ ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

## ನೈಮಿಶಾರಣ್ಯ

ಲಕ್ನೋದಿಂದ ಬಲಾಮುಗೆ ಹೋಗಿ ಅಲ್ಲಿಂದ ಸೀತಾಪುರ್‌ಗೆ ಹೋಗುವಾಗ ಮಧ್ಯದಲ್ಲಿ ನಿಮಿಸಾರ್ (ನೈಮಿ ಶಾರಣ್ಯ) ಸ್ಟೇಷನ್ನಿನಲ್ಲಿ ಇಳಿದು, ಎತ್ತಿನ ಗಾಡಿಯಲ್ಲಿ ಎರಡು ಮೈಲಿದೂರ ಪ್ರಯಾಣ ಮಾಡಿದರೆ ನೈಮಿಶಾರಣ್ಯ ಸಿಗುತ್ತದೆ ಇಲ್ಲಿ ಯಾವುದೇ ಸನ್ನಿಧಿಯೂ ಇಲ್ಲ. ಆದರೆ ಇಲ್ಲಿ ಭಗವಂತನೇ ಅರಣ್ಯ ರೂಪದಲ್ಲಿದ್ದಾನೆಂಬ ಭಾವನೆ ಇರುವುದರಿಂದ ಇಲ್ಲಿನ ಅರಣ್ಯಕ್ಕೆ ತಿರುವಾರಾಧನೆಯನ್ನು ಮಾಡುತ್ತಾರೆ. ಸೂತ ಪೌರಾಣಿಕ ಮಠವೊಂದಿದೆ. ಅಂತೆಯೇ ವ್ಯಾಸ, ಶುಕರ ಮಠಗಳೂ ಇವೆ. ಮೊದಲು ಚಕ್ರ ತೀರ್ಥದಲ್ಲಿ ಸ್ನಾನ ಮಾಡಿ, ಆ ಮೇಲೆ ಗೋಮತಿ ನದಿಯಲ್ಲಿ ಸ್ನಾನಮಾಡಿ ನಂತರ ಅರಣ್ಯಕ್ಕೆ ಭಕ್ತಿ ಸಮರ್ಪಣೆ ಮಾಡುತ್ತಾರೆ.

ಇಲ್ಲಿನ ಪ್ರಭಾವವೆಂದರೆ ದೇವರಾಜ ಪ್ಪೆರುಮಾಳ್, ಶ್ರೀ ಹರಿಲಕ್ಷ್ಮಿ, ಪುಂಡರೀಕವಲ್ಲಿ, ತಾಯಾರ್, ಶ್ರೀಹರಿ ವಿಮಾನ, ದಿವ್ಯ ವಿಶ್ರಾಂತಿ ತೀರ್ಥ, ಪೂರ್ವಾಭಿಮುಖ ನಿಂತ ನಿಲುವು, ತಿರುಮಂಗೈ ಆಳ್ವಾರ್ ಇಲ್ಲಿ ಮಂಗಳಾ ಶಾಸನ ಮಾಡಿದ್ದಾರೆ.

## ಸಾಲಿಗ್ರಾಮಂ

ಇದು ನೇಪಾಳದಲ್ಲಿ ಗಂಡಕಿನದಿ ದಡದಲ್ಲಿದೆ. ಪಾಟ್ನಾದಿಂದ ಕಠ್ಮಂಡುವಿಗೆ ವಿಮಾನದಲ್ಲಿ ಹೋಗಿ, ಅಲ್ಲಿಂದ ಸಾಲಿಗ್ರಾಮಕ್ಕೆ ಹೋಗಬಹುದು. ಇಲ್ಲವೆ, ಪಾಟ್ನಾ ದಿಂದ ರಕ್ಸೋಲ್‌ಗೆ ರೈಲಿನಲ್ಲಿ ಹೋಗಿ ಅಲ್ಲಿಂದ ರೈಲಿನಲ್ಲಿ ಮುಂದುವರಿದು ಅಮ್ಲೇಕ್ ಗಂಜ್‌ವರೆಗೆ ಹೋಗಿ ಅಲ್ಲಿಂದ 25 ಮೈಲಿ ಕಾಲು ನಡಿಗೆಯಲ್ಲಿ ಪ್ರಯಾಣ ಮಾಡಬೇಕು. ತುಂಬಾ ಕಷ್ಟಕರವಾದ ಪ್ರಯಾಣ ಮಹಾಶಿವರಾತ್ರಿಯಂದು ಕಠ್ಮಂಡೂವಿನಲ್ಲಿ ಪಶುಪತಿನಾಥರನ್ನು ಸೇವಿಸಿ ಆ ನಂತರ ಭಕ್ತರು ಸಾಲಿಗ್ರಾಮಕ್ಕೆ ಹೋಗುವರು. ಇಲ್ಲಿಗೆ ಹೋಗಲು ನೇಪಾಳ ಸರ್ಕಾರದ ಅನುಮತಿ ಬೇಕು. ದಾರಿಯುದ್ದಕ್ಕೂ ಏನೂ ಸಿಗುವುದಿಲ್ಲ ಯಾವುದೇ ಸೌಕರ್ಯವೂ ದೊರೆಯುವುದಿಲ್ಲ.

ಶ್ರೀಮೂರ್ತಿ ಪ್ಪೆರುಮಾಳ್, ಶ್ರೀದೇವಿ ನಾಚ್ಚಿಯಾರ್, ಗಗನ ವಿಮಾನ, ಚಕ್ರತೀರ್ಥ, ಗಂಡಕಿ ನದಿ, ಉತ್ತರಾಭಿಮುಖ, ನಿಂತ ನಿಲುವು, ಗಂಡಕಿ ಎನ್ನುವ ವೇಶ್ಯೆಗೆ, ಬ್ರಹ್ಮರುದ್ರಾದಿಗಳಿಗೆ ಪ್ರತ್ಯಕ್ಷ— ಇವು ಇಲ್ಲಿನ ಪ್ರಭಾವ. ಪೆರಿಯಾಳ್ವಾರ್, ತಿರುಮಂಗೈ ಆಳ್ವಾರರುಗಳು ಮಂಗಳಾಶಾಸನ ಮಾಡಿದ್ದಾರೆ.

## ಉತ್ತರ ಮಧುರ

ಇದನ್ನು ವಡಮಧುರೈ ಎಂದೂ ಕರೆಯುತ್ತಾರೆ. ದೆಹಲಿಗೆ ದಕ್ಷಿಣದಲ್ಲಿ 80 ಮೈಲಿ ದೂರದಲ್ಲಿ, ಯಮುನಾ ನದಿ ತೀರದಲ್ಲಿ ಈ ದಿವ್ಯದೇಶವಿದೆ. ಇಲ್ಲಿ ಮಧುರಾನಾಥ್‌ಜಿ ಹಾಗೂ ದ್ವಾರಕಾನಾಥ್‌ಜಿ—ಎನ್ನುವ ಎರಡು ದೇವಾಲಯಗಳಿವೆ. ಇವು ಪ್ರಾಚೀನವಲ್ಲವಾದುದರಿಂದ ಇದನ್ನು ಆಳ್ವಾರುಗಳು ಹಾಡಿಲ್ಲ. ಇಲ್ಲಿನ ವಿಶ್ರಾಂತ್ ಘಾಟ್ ಮುಖ್ಯವಾದ ಸ್ನಾನ ಘಟ್ಟ. ಇಲ್ಲಿನ ಕೃಷ್ಣನ ಸನ್ನಿಧಿಯಿಂದ ಪ್ರತಿ ಸಾಯಂಕಾಲ ದೀಪಾರಾಧನೆ ನಡೆಯುತ್ತದೆ.

ಮಧುರೆಯಿಂದ 8 ಮೈಲಿ ದೂರದಲ್ಲಿ ಬೃಂದಾವನವಿದೆ. ಇದು ಶ್ರೀ ಕೃಷ್ಣನ ಲೀಲಾ ವಿನೋದಗಳು ನಡೆದ ಸ್ಥಳ. ಅದಕ್ಕೆ ಸಂಬಂಧಪಟ್ಟ ಸ್ನಾನಘಟ್ಟಗಳು, ದೇವಾಲಯಗಳು ಇವೆ. ಇಲ್ಲಿನ ರಂಗಮಂದಿರ ದೇವಾಲಯ ನೋಡಲು ಯೋಗ್ಯವಾದುದು.

ಮಧುರೆಯಿಂದ 7 ಮೈಲಿ ದೂರದಲ್ಲಿ ಕೃಷ್ಣನು ದನಗಳನ್ನು ಮೇಯಿಸುತ್ತಿದ್ದ ಗೋವರ್ಧನಗಿರಿ ಇದೆ. ಇದರ ಸುತ್ತಳತೆ ಹತ್ತು ಮೈಲಿಗಳು. ಯಾತ್ರಾರ್ಥಿಗಳು ಇದರ ಪ್ರದಕ್ಷಿಣೆ ಮಾಡುವರು. ನಡುವೆ ವಿಶ್ರಾಂತಿ ಪಡೆಯಲು ಮಂಟಪಗಳಿವೆ. ಟಾಂಗಾದಲ್ಲೂ ಹೋಗಿ ಬರಬಹುದು.

ಗೋವರ್ಧನ, ಸತ್ಯಭಾಮಾ, ಗೋವರ್ಧನ ತೀರ್ಥ, ರಾಧಾವಲ್ಲಭ, ಗೋಕುಲನಾದ, ಶ್ರೀ ರಾಧಾದೇವಿ, ಬ್ರಹ್ಮ ಮತ್ತು ರಾಧಾತೀರ್ಥಗಳು ಕಾಳಿಂಗ ಮಡುವು, ಪೂರ್ವಾಭಿಮುಖ ನಿಂತ ನಿಲುವು, ಇಂದ್ರಾದಿ ದೇವತೆಗಳಿಗೆ, ಯಾದವರಿಗೆ ಪ್ರತ್ಯಕ್ಷ. ನಮ್ಮಾಳ್ವಾರ್, ಪೆರಿಯಾಳ್ವಾರ್, ತಿರುಮಂಗೈ ಆಳ್ವಾರ್ ಅಂಡಾಳ್—ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

## ಗೋಕುಲ

ಇದನ್ನು ತಿರುವಾಯಿಪ್ಪಾಡಿ, ತಿರುಪೇಯಾಪ್ಪಾಡಿ—ಎಂದೂ ಕರೆಯುತ್ತಾರೆ. ಮಧುರೆಗೆ ನಾಲ್ಕು ಮೈಲಿ ದೂರದಲ್ಲಿದೆ. ಇದೊಂದು ಸಣ್ಣ ಗ್ರಾಮ ಕೃಷ್ಣನ ಬಾಲಲೀಲೆಗಳಿಗೆ ಸಂಬಂಧಪಟ್ಟ ಯಾವ ಅವಶೇಷಗಳೂ ಇಲ್ಲ. ಮಹಮ್ಮದೀಯರ ಧಾಳಿಯಿಂದ ನಾಶವಾಗಿದೆ. ಪ್ರತಿಭಾನುವಾರ ಜಲಕ್ರೀಡೆ, ರಾಸಕ್ರೀಡೆಯ ಉತ್ಸವಗಳನ್ನು

ಆಚರಿಸುವರು, ಮಥುರಾನಾಥನ ಸನ್ನಿಧಿ, ಶ್ರೀ ಕೃಷ್ಣ ಹಾಗೂ ಬಲರಾಮರ ಸನ್ನಿಧಿಗಳು ಇವೆ. ಆಳ್ವಾರುಗಳು ಪಾಡಿರುವ ದೇವಾಲಯಗಳು ಯಾವುವೂ ಇಲ್ಲ.

ನವಮೋಹನ ಕೃಷ್ಣ, ರುಕ್ಮಿಣೀ ದೇವಿ, ಸತ್ಯಭಾಮಾ ನಾಚ್ಚಿಯಾರ್, ಹೇಮ ಕೂಟ ವಿಮಾನ, ಪೂರ್ವಾಭಿಮುಖ, ನಿಂತ ನಿಲುವು. ನಂದಗೋಪನಿಗೆ ಪ್ರತ್ಯಕ್ಷ. ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ತಿರುಮಂಗೈ ಆಳ್ವಾರರುಗಳು ಮಂಗಳಾ ಶಾಸನ ಮಾಡಿದ್ದಾರೆ.

## ದೇವ ಪ್ರಯಾಗ

ಹರಿದ್ವಾರದಿಂದ 58 ಮೈಲಿ ದೂರದಲ್ಲಿರುವ ಈ ಕ್ಷೇತ್ರವನ್ನು ತಿರುಕಣ್ಣಂಗ್ಡಿ ನಗರ್ ಅಥವಾ ತಿರುಕ್ಕಂಡಸ್ ಘಟೆನಗರ್ ಎಂದೂ ಕರೆಯುತ್ತಾರೆ ಬದರಿಕಾಶ್ರಮದ ಮಾರ್ಗದಲ್ಲಿ ಹಿಮವದ್ಗಿರಿಯ ಮೇಲಿದೆ.

ಯಾತ್ರಿಕರು ಮೊದಲು ಹರಿದ್ವಾರವನ್ನು ತಲುಪಿ, ಅಲ್ಲಿ ಗಂಗಾ ಸ್ನಾನ ಮಾಡಿ, ಆದಿನಾರಾಯಣ, ಆದಿಲಕ್ಷ್ಮಿ, ಆನಂದ ವಿಮಾನ, ಹರಿಪಾದ ತೀರ್ಥ, ಗಂಗಾನದಿ, ಭುಜಂಗಶಯನ, ಇತ್ಯಾದಿ ಪ್ರಭಾವಗಳನ್ನು ಸಂದರ್ಶಿಸಿ, ಹರಿಚರಣ ಘಾಟ್‌ನಲ್ಲಿನ ಶ್ರೀವಿಷ್ಣು ಪಾದವನ್ನು ಪೂಜಿಸಬೇಕು, ಗಂಗಾದ್ವಾರಾ, ಮಾಯಾಪುರಿ ಎಂದು ಕರೆಯುವ ಈ ಕ್ಷೇತ್ರದಲ್ಲಿಯೇ ಶುಕ, ಪರೀಕ್ಷಿತ್ತುಗಳು ತಪಸ್ಸು ಮಾಡಿದುದು,ದಕ್ಷ ಪ್ರಜಾಪತಿಯಾಗ ಮಾಡಿದುದು. ಮೋಕ್ಷದಾಯಕವಾದ ಸಪ್ತ ಪುರಿಗಳಲ್ಲಿ ಇದೊಂದು.

ಹರಿದ್ವಾರದಿಂದ ಹದಿನೈದು ಮೈಲಿ ದೂರದಲ್ಲಿ ಹೃಷೀಕೇಶವಿದೆ. ಇಲ್ಲಿಂದ ಹಿಮಗಿರಿಯ ಏರಿಕೆ ಪ್ರಾರಂಭ. ಇಲ್ಲಿಂದ ಬದರಿಕಾಶ್ರಮಕ್ಕೆ ಏರಿಕೆ ಪ್ರಾರಂಭ. ಇಲ್ಲಿಂದ ತಪೋವನ, ಲಕ್ಷ್ಮಣಝೂಲಾ ಗರುಡ ಚಟ್ಟಿ, ಮೋಹನ ಚಟ್ಟಿ, ಶೋಡಾ ಬಿಜಲಿ, ಬಂದರ್ ಚಟ್ಟಿ, ಮಹಾದೇವ ಚಟ್ಟಿ, ರಾಂ ಚಟ್ಟಿ, ವ್ಯಾಸ್ ಘಾಟ್, ಶಾಲೂರಿಗಳನ್ನು ದಾಟಿ ದೇವ ಪ್ರಯಾಗವನ್ನು ತಲುಪುತ್ತೇವೆ.

ಕಠಿನಗರ್ ಎಂದೂ ಕರೆಯುವ ದೇವಪ್ರಯಾಗದಲ್ಲಿ ಎಲ್ಲ ರೀತಿಯ ವಸತಿ, ತಿಂಡಿಯ ಸೌಕರ್ಯಗಳಿವೆ. ಇಲ್ಲಿ ವಿಷ್ಣು ಗಂಗ, ಭಾಗೀರಥಿಗಳು ಸಂಗಮವಾಗಿ 'ಗಂಗಾ ನದಿ' ಎಂಬ ಹೆಸರು ಪಡೆಯುತ್ತದೆ. ಅಲಕನಂದ, ಭಾಗೀರಥಿ ಮತ್ತು ಸರಸ್ವತಿ ನದಿಗಳ ತ್ರಿವೇಣಿ ಸಂಗಮವಿದು. ಪೆರಿಯಾಳ್ವಾರ್ ತಿರುಮಂಗೈಯಾಳ್ವಾರ್ ರವರು ಮಂಗಳಾಶಾಸನ ಮಾಡಿರುವ ಈ ಕ್ಷೇತ್ರದಲ್ಲಿ ನೀಲಮೇಘಪ್ಪೆರುಮಾಳ್, ಪುರುಷೋತ್ತಮ, ಪುಂಡರೀಕವಲ್ಲಿ ನಾಚ್ಚಿಯಾರ್, ಮಂಗಳ ವಿಮಾನ, ಪೂರ್ವಾಭಿಮುಖ, ನಿಂತ ನಿಲುವು, ಭಾರದ್ವಾಜ ಋಷಿಗಳಿಗೆ ಪ್ರತ್ಯಕ್ಷವಾಗಿರುವ ಪ್ರಭಾವ ವಿದೆ.

## ಜ್ಯೋತಿರ್ ಮಠ

ದೇವ ಪ್ರಯಾಗದಿಂದ ಬದರಿ ಮಾರ್ಗದಲ್ಲಿ 106 ಮೈಲಿ ದೂರದಲ್ಲಿನ ಈ ಕ್ಷೇತ್ರವನ್ನು ತಿರುಪ್ಪಿರಿದಿ ಎಂದೂ, ನಂದ ಪ್ರಯಾಗವೆಂದೂ ಕರೆಯುತ್ತಾರೆ. ದೇವ ಪ್ರಯಾಗದಿಂದ ಹೊರಟು ಅಂಡಕೋಟಿ, ರಾಣಿಭಾಗ್, ರಾಂಪೂರ್, ಬಿಲ್‌ಕೇದಾರ್, ಶ್ರೀನಗರ್ (ಕಾಶ್ಮೀರದಲ್ಲ ಇದೇ ಬೇರೆ, ಇಲ್ಲಿ ಸತ್ಯನಾರಾಯಣ, ನಾರದ, ಗರುಡ ಸನ್ನಿಧಿಗಳಿವೆ) ಶುಕ್ರತಾ, ಚತ್ರಾ, ಘರ್ ಗೋಡಾ, ಗುಲಾಬ್‌ರಾಯಿಗಳನ್ನು ಹಾಯ್ದು ರುದ್ರ ಪ್ರಯಾಗಕ್ಕೆ ಬರುತ್ತೇವೆ. ಇದು ಮಂದಾಕಿನಿ ಅಲಕನಂದಾಗಳ ಸಂಗಮಸ್ಥಳ. ಇಲ್ಲಿಯೇ ಈಶ್ವರನು ತನಗೆ ಹತ್ತಿದ್ದ ಬ್ರಹ್ಮ ಹತ್ಯಾದೋಷವನ್ನು ಪರಿಹರಿಸಿಕೊಂಡ. ಇಲ್ಲಿಂದ ಗೌರಿಕುಂಡಕ್ಕೆ ಬೇರೆಯೇ ಆದ ಮಾರ್ಗವಿದೆ. ಮುಂದುವರಿದು ಶಿವಾನಂದಿ, ನಾಗರಾಜ್, ಪಡಾ ಪೀಪಲ್, ಕರ್ಣ ಪ್ರಯಾಗ್ ಉಂಟಾಗಳನ್ನು ಹಾಯ್ದು ನಂದ ಪ್ರಯಾಗವನ್ನು ಸೇರುತ್ತೇವೆ. ಇಲ್ಲಿ ಕುಬೇರನು ತಪಸ್ಸನ್ನಾಚರಿಸಿದನು. ಇಲ್ಲಿ ನರಸಿಂಹಧಾರಾ ಬಲರಾಮರ, ಸನ್ನಿಧಿಗಳಿವೆ. ಪರಮ ಪುರುಷ, ಪರಿಮಳವಲ್ಲಿ ನಾಚ್ಚಿಯಾರ್, ಗೋವರ್ಧನ ವಿಮಾನ ಮತ್ತು ತೀರ್ಥಗಳು, ಪೂರ್ವಾಭಿಮುಖ ಭುಜಂಗಶಯನ ಇಲ್ಲಿನ ಪ್ರಭಾವಗಳು, ಇಲ್ಲಿ ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ.

## ಬದರಿಕಾಶ್ರಮಂ

ಪಾಂಡುಕೇಶ್ವರದಿಂದ ಹದಿನೈದು ಮೈಲಿಗಳ ದೂರದಲ್ಲಿ ಈ ದಿವ್ಯಕ್ಷೇತ್ರವಿದೆ. ಪ್ರತಿ ಶ್ರೀವೈಷ್ಣವನೂ ದರ್ಶಿಸಬೇಕಾದ ಕ್ಷೇತ್ರವಿದು, ಇಲ್ಲಿ ಚಳಿ ಹೆಚ್ಚು. ಸುಮಾರು 2321 ಅಡಿಗಳ ಎತ್ತರದಲ್ಲಿರುವುದರಿಂದ ಉಸಿರಾಟವೂ ಕಷ್ಟ. ತುಂಬಾ ವಯಸ್ಸಾದವರು ಹೃದ್ರೋಗಿಗಳು ಇಲ್ಲಿಗೆ ಬರಬಾರದು. ಅಗ್ನಿದೇವನು ಜಲ ರೂಪವನ್ನು ಪಡೆದು ದೇವರ ಶ್ರೀಪಾದಗಳ ಬಳಿ ಉದ್ಭವಿಸಿ, ತಪ್ತಗುಂಡಂ ಎನ್ನುವ ಹೆಸರಿನಿಂದ ಪ್ರವಹಿಸುತ್ತಿದ್ದಾನೆ. ಈಚೆಗೆ ಇಲ್ಲಿ ಅನೇಕ ವಸತಿ ಸೌಕರ್ಯಗಳು ಏರ್ಪಾಟಾಗಿವೆ. ತಪ್ತಕುಂಡ ತೀರ್ಥದಲ್ಲಿ ಸ್ನಾನ ಮಾಡಿ, ದೇವರ ಸೇವೆ ಮಾಡ ಬೇಕು. ತಪೋಭಂಗಿಯಲ್ಲಿರುವ ಬದರೀ ನಾರಾಯಣ, ಅರವಿಂದವಲ್ಲಿ ತಾಯಾರ್ ತಪ್ತಕಾಂಚನ ವಿಮಾನ, ತಪ್ತಕುಂಡತೀರ್ಥ, ಪೂರ್ವಾಭಿಮುಖ, ಆಸೀನ ಭಂಗಿ–ಇವು ಇಲ್ಲಿಯ ಪ್ರಭಾವ. ಬದರಿ ವೃಕ್ಷದ ಕೆಳಗೆ ಪದ್ಮಾಸನಾಸೀನನಾಗಿ ಜ್ಞಾನ ಮುದ್ರೆಯನ್ನು ಧರಿಸಿದ ಪರಮಾತ್ಮನು ಇಲ್ಲಿ ಜಪ ಶೀಲನಾದ ತಾಪಸಿಯಾದ ಮಾನವನಿಗೆ ಮಂತ್ರೋಪದೇಶವನ್ನು ಮಾಡುವನು. ಪೆರಿಯಾಳ್ವಾರ್ ತಿರುಮಂಗೈ ಆಳ್ವಾರರುಗಳು ಮಂಗಳಾ ಶಾಸನ ಮಾಡಿದ್ದಾರೆ.

ಬಳಿಯಿರುವ ಬ್ರಹ್ಮ ಕಪಾಲದಲ್ಲಿ ಪಿಂಡ ಪ್ರದಾನ ನಡೆಸುವರು. ಇಲ್ಲಿಂದ ಐದು ಮೈಲಿದೂರದಲ್ಲಿರುವ ವಸುಧಾರದಲ್ಲಿ ಪಾಪ ಪುಣ್ಯಗಳ ನಿರ್ಣಯವಾಗುವುದೆಂದು ನಂಬಿಕೆ.

ನಾರಾಯಣನು ನರನಿಗೆ ಅಷ್ಟಾಕ್ಷರೀ ಮಂತ್ರವನ್ನು ಉಪದೇಶಿಸಿದ ಸ್ಥಳವಿದು. ಆದರಿಂದ ಶ್ರೀವೈಷ್ಣವರಿಗೆ ಶ್ರೇಷ್ಠ.

ಈ ಸನ್ನಿಧಿಯನ್ನು ಅಲ್ಪಿಶಂ ಮಾನವ ಪೌರ್ಣಮಿಯಂದು ದೇವರಿಗೆ ತಿರುಮಂಜನ ಇತ್ಯಾದಿಗಳನ್ನು ನೆರವೇರಿಸಿ, ಧಾನ್ಯಾದಿಗಳನ್ನು ಭೂಮಿಯಲ್ಲಿ ಭದ್ರ ಪಡಿಸಿ, ಪಾಂಡುಕೇಶ್ವರ ಇತ್ಯಾದಿ ಸುತ್ತ ಮುತ್ತಲ ಗಾಮಗಳಿಗೆ ತೆರಳುವರು. ಮತ್ತೆ ಚಿತ್ರಾ ಪೌರ್ಣಮಿಯಂದು ಸನ್ನಿಧಿಯ ಬಾಗಿಲನ್ನು ತೆರೆಯುತ್ತಾರೆ. ಈ ಕಾರಣದಿಂದ ಆರುತಿಂಗಳು ಮಾನವರು ಆರು ತಿಂಗಳು ದೇವತೆಗಳು ಇಲ್ಲಿನ ದೇವರನ್ನು ಆರಾಧಿಸುವರು ಎನ್ನುತ್ತಾರೆ. ಇದಕ್ಕೆ ನಿದರ್ಶನವಾಗಿ ಅಲ್ಪಿಶಂ ಪೌರ್ಣಮಿಯಂದು ಹಚ್ಚಿದ ದೀಪ ಅಲಂಕರಿಸಿದ ಹೂಗಳು ಆರು ತಿಂಗಳ ನಂತರ ಚಿತ್ರಾ ಪೂರ್ಣಮಿಯಂದು ತೆರೆದಾಗ ದೀಪವೂ ಉರಿಯುತ್ತಿದ್ದು, ಹೂಗಳೂ ಬಾಡದೆ ಇರುತ್ತದೆ. ಈ ಸೇವೆ ಪರಮ ಪವಿತ್ರವೆಂದು ನಂಬಿ ಸಾವಿರಾರು ಜನರು ಕಾದಿರುತ್ತಾರೆ.

## ತಿರುಪ್ಪಾರ್ ಕಡಲ್

ಇದನ್ನೇ ಕ್ಷೀರಾಬ್ಧಿ ಅಥವಾ ಕ್ಷೀರ ಸಮುದ್ರ ಎನ್ನುವುದು. ಉತ್ತರ ಮೇರುವಲಯದ ಆಚೆ ಇದೆ

# ನಾನು - ನೀನು

ಯಮನ್ ಕಲ್ಯಾಣಿ — ಆದಿತಾಳ

ಉನ್ನತೋನ್ನತ ಶಿಖರದಿ ಇಂತು ನಿಂತ ಭಾವವೇನು? ಅರಿಯೆ,
ನಿಂತ ಭಾವವೇನು? ದೊರೆಯೆ!
ನನ್ನ ಮೊರೆಯು ಕೇಳಲು ಮನಸಾಗದೆ ದೂರ ಸರಿದೆಯೇನು?
ನೀನು ದೂರಸರಿದೆಯೇನು? ೧

ಅಪರೆ ನಿನ್ನನು ಹೃದಯಕಮಲದಲಿ ನೆಲೆಗೊಳಿಸಿದೆ ನಾನು,
ನೆಲೆಗೊಳಿಸಿದೆ ನಾನು!
ಓ ದಯಾಮಯಾ! ನನ್ನನು ತೊರೆದು ಹೋಗಲಾರೆ ನೀನು
ಹೋಗಲಾರೆ ನೀನು ॥ ೨

ಪಂಚೇಂದ್ರಿಯಗಳ ಕಾವಲಿಟ್ಟಿರುವೆ ಪದುಳವಾಗಿ ನಾನು;
ಪದುಳವಾಗಿ ನಾನು;
ಪಂಚಾಯುಧಧರ ಪರಬ್ರಹ್ಮ ನೀನೆಂದು ಬಲ್ಲೆನಾನು; ೩

ನನ್ನನು ಕವಿದ ತಮದ ತೆರೆಯನು ಸರಿಸಬೇಕು ನೀನು,
ಸರಿಸಬೇಕು ನೀನು;
ನಿನ್ನ ಭಕ್ತರ ಸಂಗದಿ ನಿನ್ನನು ಹೊಗಳಬೇಕು ನಾನು
ಹೊಗಳಬೇಕು ನಾನು; ೪

ಭಕ್ತಿಪಾಶದಿ ಕಟ್ಟಲು ನಿನ್ನನು ಹವಣಿಸಿರುವೆ ನಾನು
ಹವಣಿಸಿರುವೆ ನಾನು,
ಮುಕ್ತಿ ಪ್ರಸಾದವ ನೀಡುವತನಕ ನಿನ್ನ ಬಿಡೆನು ನಾನು,
ನಿನ್ನ ಬಿಡೆನು ನಾನು; ೫

ವೆಂಕಟರಮಣ! ಸಂಕಟ ಹರಣ! ಪಾವನ ಮೃದುಚರಣ!
ಪಾವನ ಮೃದುಚರಣ!
ಲೆಂಕರ ಪೊರೆವ ಬಿರುದನೆಂದಿಗೂ ಮರೆಯದಿರೈ ನೀನು,
ಮರೆಯದಿರೈ ನೀನು ॥ ೬

**ಶ್ರೀ ಕೆ. ಎಸ್. ಜಾನಕೀರಾಮಯ್ಯ**

ಎಂದು ನಂಬಿಕೆ. ದೇವತೆಗಳು ಋಷಿಗಳು, ಯೋಗಿಗಳು ಇತ್ಯಾದಿ ಸೂಕ್ಷ್ಮ ದೇಹಿಗಳು ಮಾತ್ರ ಇಲ್ಲಿಗೆ ಹೋಗಲು ಸಾಧ್ಯ. ಮನುಜ ಶರೀರದೊಂದಿಗೆ ಹೋಗಲು ಸಾಧ್ಯವಿಲ್ಲ. ಭಗವಂತನು ಇಲ್ಲಿ ವ್ಯೂಹ ಮೂರ್ತಿಯಾಗಿದ್ದಾನೆ. ಆದರೂ ಇದೊಂದು ದಿವ್ಯ ದೇಶವನ್ನಾಗಿ ಪರಿಣಮಿಸಲಾಗಿದೆ. ಇಲ್ಲಿಂದಲೇ ಮಹಾವಿಷ್ಣು ಅವತರಿಸಿದುದು ಇಲ್ಲಿಯೇ ಸಮುದ್ರಮಥನವಾಯಿತು.

ಕ್ಷೀರಾಬಿ ನಾಥನು, ವ್ಯೂಹ ಮೂರ್ತಿ, ಕಡಲ್ ಮಗಳ್ ನಾಚ್ಚಿಯಾರ್ ಅಷ್ಟಾಂಗ ವಿಮಾನ ಅಮೃತ ತೀರ್ಥ, ದಕ್ಷಿಣಾಭಿಮುಖ, ಭುಜಂಗ ಶಯನ, ಬ್ರಹ್ಮರುದ್ರಾದಿ ದೇವತೆಗಳಿಗೆ ಪ್ರತ್ಯಕ್ಷ ಪೊಯ್‌ಗೈ, ಪೂದತ್ತಾರ್, ಪೇಯ್, ತಿರುಮೊಳಿಶೈ ನಮ್ಮಾಳ್ವಾರ್, ಕುಲಶೇಖರ, ಪೆರಿಯಾಳ್ವಾರ್, ಆಂಡಾಳ್, ತಿರುಮಂಗೈ–ಇತ್ಯಾದಿ ಎಲ್ಲ ಆಳ್ವಾರುಗಳೂ ಮಂಗಳಾಶಾಸನ ಮಾಡಿದಾರೆ.

## ಪರಮಪದ ತಿರುನಾಡು

ಪ್ರಧಾನ ಪರಮಪದನಾಥನು ಪರವಾಸುದೇವ ಶ್ರೀವೈಕುಂಠನಾಥನು, ಪೆರಿಯ ಪಿರಾಟ್ಟಿ, ಆನಂದಾಂಗ ವಿಮಾನ, ವಿರಜಾನದಿ, ಐರಮ್ಮತ ಪುಷ್ಕರಿಣಿ, ಸೋಮ ಸವನ, ಕೂವಿಳ ವೃಕ್ಷ, ದಕ್ಷಿಣಾಭಿಮುಖ, ನಿಂತ ನಿಲುವು, ಅನಂತ ಗರುಡ ವಿಷ್ವಕ್ಸೇನರು ಇತ್ಯಾದಿ ನಿತ್ಯ ಸೂರಿಗಳಿಗೆ, ಮುಕ್ತರಿಗೆ ಪ್ರತ್ಯಕ್ಷ. ಪೊಯ್ ಆಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈ ಆಳ್ವಾರ್, ನಮ್ಮಾಳ್ವಾರ್ ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಮಂಗೈ ಆಳ್ವಾರ್ ಆಂಡಾಳ್‌ರವರುಗಳು ಮಂಗಳಾಶಾಸನ ಮಾಡಿದ್ದಾರೆ.

★



# ಸೌಂದರ್ಯೋಪಾಸನೆ

ಯುವವಾಣಿ

‘ಸೌಂದರ್ಯಾಭಿರುಚಿ’ ಎಂದರೆ ಸೌಂದರ್ಯದ ಆರಾಧನೆ, ಸುಂದರ ವಸ್ತುಗಳ ಕುರಿತು ಹಲವು, ಸುಂದರ ವಸ್ತುಗಳನ್ನು ಅರಿಸುವುದು, ಸೃಷ್ಟಿಸುವುದು, ಕಾಪಾಡುವುದು, ಬೆಳೆಸುವುದು ಮುಂತಾದ ಪ್ರವೃತ್ತಿಗಳಿದ್ದಲ್ಲಿ ಸೌಂದರ್ಯಾಭಿರುಚಿ ಇದೆ ಎಂದರ್ಥ.

ಈ ಅಭಿರುಚಿ ಮಾನವರಲ್ಲಿ ಮಾತ್ರ ಸಾಧ್ಯ. ಅನೇಕ ಪಶು ಪಕ್ಷಿಗಳು ಬಹು ಸುಂದರವಾಗಿರುತ್ತವೆ. ಈ ಸೌಂದರ್ಯ ಅವುಗಳಿಗೆ ಪ್ರಕೃತಿಯ ಕೊಡುಗೆ. ಅದಕ್ಕಾಗಿ ಅವುಗಳ ಪ್ರಯತ್ನವೇನೂ ಇರುವುದಿಲ್ಲ. ಜಿಂಕೆಯ ಕಣ್ಣು, ನವಿಲಿನ ಬಣ್ಣ, ಆನೆಯ ದಂತ, ಹುಲಿಯ ಚರ್ಮ, ಕೋಗಿಲೆಯ ಕಂಠ – ಇವೆಲ್ಲವೂ ಸುಂದರವೇ. ಆದರೆ ಯಾರಿಗೆ; ನಮಗೆ. ಪ್ರಾಣಿಗಳ ದೃಷ್ಟಿಯಿಂದ ಪ್ರಾಣಿಗಳಿಗೆ ಇವುಗಳಿಗೆ ಸೌಂದರ್ಯ ಭಾವ ಇರಲು ಸಾಧ್ಯವಿಲ್ಲ. ಸೌಂದರ್ಯ ನಿರ್ಮಿತಿಯ ಕ್ಷಮತೆಯೂ ಅವುಗಳಲ್ಲಿಲ್ಲ. ಕಾಡು ಅವುಗಳ ದೃಷ್ಟಿಯಿಂದ ವಾಸಿಸಲು ಒಂದು ಸುರಕ್ಷಿತ ಸ್ಥಳ. ವನರಾಜಿ, ಸೃಷ್ಟಿ ಸೌಂದರ್ಯ, ಪುಷ್ಪರಾಣಿ, ವನದೇವತೆ, ಗಂಧರ್ವನಗರಿ, ಉಷಾಸುಂದರಿ – ಇವೆಲ್ಲ ನಮ್ಮ ಶಬ್ದಗಳು, ಪಶುಪಕ್ಷಿಗಳದ್ದಲ್ಲ. ವಸ್ತುವಿನಲ್ಲಿ ಶಾರೀರಕ ಉಪಯುಕ್ತತೆ ಕಾಣುವುದು ಪ್ರಾಣಿಗಳ ಲಕ್ಷಣ. ಉಪಯೋಗನಿರಪೇಕ್ಷತೆ ಸೌಂದರ್ಯ ತತ್ತ್ವದ ಹುಡುಕುವಿಕೆ ಮಾನವನ ಲಕ್ಷಣ.

ಪ್ರಾಚೀನಕಾಲದಿಂದಲೂ ಮಾನವನು ವಿವಿಧ ಪ್ರಕಾರದ ಸೌಂದರ್ಯದ ಶೋಧನೆ ಮತ್ತು ಉಪಾಸನೆ ನಡೆಸುತ್ತಲೇ ಇದ್ದಾನೆ. ವೇದಗಳಲ್ಲಿ ಸೃಷ್ಟಿ ಸೌಂದರ್ಯವನ್ನು ವರ್ಣಿಸುವ ಅನೇಕ ಋಕ್ಕುಗಳಿವೆ. ಪುರಾಣಗಳಲ್ಲಿನ ಅನೇಕ ಸುಂದರ ವನ, ಅರಣ್ಯಗಳ, ನಗರಗಳ, ಕಟ್ಟಡಗಳ, ಸುಂದರ ಸ್ತ್ರೀ-ಪುರುಷರ, ಸುಂದರ ವೇಷ-ಭೂಷಣಗಳ ಸುಂದರ ಕಲ್ಪನೆ–ಸಂಭಾಷಣೆಗಳ ವರ್ಣನೆ ಸಿಗುತ್ತದೆ. ದೇವ–ದಾನವ–ಮಾನವರಲ್ಲಿನ ಅನೇಕ ಯುದ್ಧಗಳು ಸುಂದರವಸ್ತುಗಳಿಗಾಗಿ ನಡೆದಿವೆ

ಪ್ರತಿ ವರ್ಷ ಸಹಸ್ರಾರು ರಸಿಕರು ಲಕ್ಷಾವಧಿ ರೂಪಾಯಿಗಳನ್ನು ಖರ್ಚುಮಾಡಿ ಕಾಶ್ಮೀರ, ಗೋವಾ, ಅಜಂತಾ, ಎಲ್ಲೋರ, ಕೋಣಾರ್ಕ್, ಬೆಳಗೊಳ, ಹಳೆಬೀಡು–ಬೇಲೂರು ಮುಂತಾದ ಕಡೆ ಹೋಗುತ್ತಾರೆ. ಕೆಲವರು ಹಿಮಾಲಯದಲ್ಲಿನ ಚಿನ್ನದ ಮೆರುಗಿನ ಶಿಖರದಿಂದ ಆಕರ್ಷಿತರಾಗಿ ಧಾವಿಸಿದರೆ, ಕೆಲವರು ಸಾಗರ ತೆರೆಗಳ ತಾಂಡವದಿಂದ ಮುದಗೊಳ್ಳುತ್ತಾರೆ. ಮೂಡುವ ಮತ್ತು ಮುಳುಗುವ ಸೂರ್ಯ ಬಿಂಬವಂತೂ ಕವಿ–ಕಲಾಕಾರರಿಗೆ ಅತ್ಯಂತ ಪ್ರೀತಿಯ ವಿಷಯ. ಸಾಹಿತ್ಯ ಎಂದರೆ ಸುಂದರ ಕಲ್ಪನೆ, ಭಾವನೆ ಮತ್ತು ಭಾಷೆಗಳ ಶ್ರೀಮಂತ ಸಂಯೋಜನೆ. ರಾಮಾಯಣ, ಮಹಾಭಾರತಗಳಂತಹ ಕಾವ್ಯಗಳೆಂದರೆ ಶಬ್ದಗಳ ಆಶ್ರಯದಿಂದ ಪ್ರಕಟವಾದ ಸ್ಥಳ. ಕಾಲಾತೀತ ರಮಣೀಯತೆಯಲ್ಲದೆ ಇನ್ನೇನು? ಸತ್ಯಂ, ಶಿವಂ, ಸುಂದರಂ– ಈ ಮೂರು ಮಾನವ ಬದುಕಿನ ಮೂಲಭೂತ ಸಿದ್ಧಾಂತಗಳು.

ಈ ಸೌಂದರ್ಯದ ಮಹತ್ವವನ್ನು ಪ್ರಾಚೀನ ಕಾಲದಿಂದ – ‘ಇಂದಿನವರೆಗೆ ಸಹಸ್ರಾರು ಕವಿಗಳು ಹಾಡಿದ್ದಾರೆ. ಸೌಂದರ್ಯಪೂಜೆ ವಿಶ್ವವ್ಯಾಪಕವಾದರೂ, ಸೌಂದರ್ಯದ ಕಲ್ಪನೆ ಭಿನ್ನ ಭಿನ್ನವಾಗಿದೆ. ಇವೆಲ್ಲ ಕೇವಲ ಶ್ರೀಮಂತರ ಮೋಜಿನ ಸಂಗತಿಗಳು ಎಂದು ದೂಷಿಸುವರೂ ಇಲ್ಲದಿಲ್ಲ. ಜಗತ್ತಿನ ಸುಂದರ ವಸ್ತು ಯಾವುದರಾದರೂ ಇದ್ದಲ್ಲಿ ಅದು ರೊಟ್ಟಿ ಮತ್ತು ಹಣ– ಇವಲ್ಲವೇ ಸೌಂದರ್ಯ. ಇದು ಕೆಲವರ ಅಭಿಪ್ರಾಯ. ಇನ್ನೂ ಕೆಲವರ ಅಭಿಪ್ರಾಯದಲ್ಲಿ ಜಗತ್ತಿನ ಎಲ್ಲವೂ ಸುಂದರವೇ. ಇವೆಲ್ಲವೂ ಭಗವಂತನ ಕಲೆಗಳೇ. ಇವುಗಳಲ್ಲಿ ಪ್ರತಿಯೊಂದು ಸುಂದರವಾಗಿದೆ. ಕೆಲವರು; ‘ಇಂತಹ ಕೆಲವು ಲಕ್ಷಣಗಳು ಇದ್ದಲ್ಲಿ ವಸ್ತು ಸುಂದರ’ ಎನ್ನುತ್ತಾರೆ. ಇನ್ನೂ ಕೆಲವರು “ಸೌಂದರ್ಯ ವಸ್ತುವಿನಲ್ಲಿಲ್ಲ, ನೋಟವಲ್ಲಿದೆ” ಎನ್ನುತ್ತಾರೆ. *Fragrance is not in the rose but in the nose* ಎಂಬುದು ಇವರ ವಾದ. ಒಟ್ಟಿನಲ್ಲಿ ಸೌಂದರ್ಯ ನಮ್ಮ ಅನುಭವಕ್ಕೆ ಬರುವುದು ನಮ್ಮ ವೃತ್ತಿ, ಭಕ್ತಿ, ದೃಷ್ಟಿ ಮತ್ತು ಜ್ಞಾನದಿಂದ ಎಂಬುದು ನಿಶ್ಚಿತ. ಇಂತಹ ಸೌಂದರ್ಯದ ಅನುಭವದಿಂದ ಬರುವ ಆನಂದ ಕ್ಷಣಿಕವಲ್ಲ. ಚಿರಕಾಲಿಕ ಅದು ಸ್ವಾರ್ಥಪ್ರೇರಿತವಲ್ಲ. ಆ ಆನಂದ, ಬಡವ, ಬಲ್ಲಿದ, ಆ ದೇಶ ಈ ದೇಶ ಮುಂತಾದ ಎಲ್ಲ ಭೇದಗಳಿಂದ ಮೇಲೆ ಇರುತ್ತದೆ.

ಸೌಂದರ್ಯವೆಂಬುದು ಒಂದು ಮಹತ್ವಪೂರ್ಣ ಶಕ್ತಿ. ಆತ್ಮ ಸಾಕ್ಷಾತ್ಕಾರವೂ ಒಂದು ರೀತ್ಯ ಸೌಂದರ್ಯದ ಅನುಭವ ಎಂದು ನಮ್ಮ ಸಮಾಜದ ಅನೇಕರ ಅಭಿಮತವಾಗಿದೆ. ಯಾವೊಂದು ಸುಂದರ ಭಾವನೆ, ರಮಣೀಯ ಕಲ್ಪನೆ, ಉದಾತ್ತ ವಿಚಾರ, ರೂಪಲಾವಣ್ಯ ; ಶಬ್ದ ನಾಟ್ಯಸ್ವರ ಮಾಧುರ್ಯ-ಇವೆಲ್ಲವೂ ಮನುಷ್ಯನಿಗೆ ಆನಂದ ನೀಡುವ ಸಂಗತಿಗಳೇ. ಇವುಗಳ ಅನುಭವವಾದಾಗ ‘ಎಷ್ಟು ಭವ್ಯ, ಎಷ್ಟು ಸುಂದರ’ ಎಂಬ ಉದ್ಗಾರ ಬಾಯಲ್ಲಿ ಬರುತ್ತದೆ.

ನಮ್ಮ ಮಾತು, ಕೃತಿ, ಶ್ರುತಿ ಎಲ್ಲವೂ ಸುಂದರವಾಗಿರಬೇಕೆಂಬುದು ಎಲ್ಲರ ಇಚ್ಛೆ. ಮಾನವನ ಬದುಕಿನ ಒಳ-ಹೊರಗೆಲ್ಲವನ್ನು ಸುಂದರವಾಗಿರಿಸಬೇಕಾದರೆ ಬಹಳ ಪರಿಶ್ರಮದ ಅಗತ್ಯವಿದೆ. ಮನುಷ್ಯನಾಗಬೇಕಾದರೆ ಸೌಂದರ್ಯಾಭಿರುಚಿ ಇರಬೇಕು. ಮತ್ತು ಸೌಂದರ್ಯಾಭಿರುಚಿ ಉಂಟಾಗಲು ಕಲೋಪಾಸನೆ ನಡೆಯಬೇಕು.

**ಶ್ರೀ ಆದ್ಯ ರಾಮಾಚಾರ್ಯ**

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | „ 4–30 ರಿಂದ 5–00 | „ 5–30 ರಿಂದ 6–00 |
| (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | „ 5–45 ರಿಂದ 7–00 | „ 6–30 ರಿಂದ 11–30 |
| ಸಳ್ಳಿಂಪು | „ 7–00 ರಿಂದ 7–30 | |
| ಅಭಿಷೇಕ | „ 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/-ಶುಲ್ಕ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/-) | — |
| ರಾತ್ರಿ ಗಂಟೆ | ರಾತ್ರಿ [illegible]–00 ರಿಂದ 8–30 | ರಾತ್ರಿ [illegible]–00 ರಿಂದ 6–30 |
| ಸರ್ವದರ್ಶನ | — | „ 6–30 ರಿಂದ 9–15 |
| ಏಕಾಂತಸೇವೆ | „ 8–30 ರಿಂದ 9–00 | „ 9–15 ರಿಂದ 9–30 |

ಪೇಷ್ಕಾರ್.

ಎಲ್ಲ ಕಲೆಗಳ ಮೂಲಸ್ಥಾನ ಭಗವಂತ. ಎಲ್ಲ ಕಲೆಗಳ ನಂತರವೂ ಭಗವಂತನೇ. ಮಾಂಗಲ್ಯ ಮತ್ತು ಚಿರಂತನ ಸುಖವೇ ಕಲೆಯ ಪ್ರಾಣ ಮತ್ತು ಅದೇ ಕಲೆಯ ಗುರಿಯೂ ಆಗಿದೆ.

ಇಂದು ಎಲ್ಲೆಡೆ ನಿಜ ಸೌಂದರ್ಯದ ಉಪಹಾಸ ನಡೆದಿದೆ. ಸುಂದರವಲ್ಲದ ವಸ್ತು ಮತ್ತು ವಿಚಾರಗಳಿಗೆ ಪ್ರತಿಷ್ಠೆ ಸಿಗುತ್ತದೆ. ಹಳ್ಳಿಗಳ ಶಾಲೆಗಳಲ್ಲಿ ಎಲ್ಲಿದೆ ಸೌಂದರ್ಯ? ಅಲಕ್ಷ್ಯಕೊಳಗಾದ ಕಟ್ಟಡ, ಹರಕು ಬಟ್ಟೆಯ ದುರ್ದೈವೀ ಮಕ್ಕಳಿಂದ ತುಂಬಿದೆ. ನಗರಗಳಲ್ಲಿ ಶಾಲೆಯ ತೋಟವಿಲ್ಲ. ಹೂವುಗಿಡಗಳ ಚಿತ್ರಗಳೂ ಇರುವುದಿಲ್ಲ. ಶಾಲೆಗಳಲ್ಲಿ ಸಂತಸದ ವಾತಾವರಣವಿಲ್ಲ. ಸಿಡುಕಿನ ಶಿಕ್ಷಕರು, ಆಸಕ್ತಿ ಇಲ್ಲದ ತಂದೆ ತಾಯಿಗಳು–ಇಂತಹ ಪರಿಸರದಲ್ಲಿ ಮಕ್ಕಳ ಮನಸ್ಸಿನಲ್ಲಿ ಸೌಂದರ್ಯ ಭಾವನೆ ನಿರ್ಮಾಣ ಸಾಧ್ಯವೇ.

ಸಿನೆಮಾ – ನಾಟಕಗೃಹಗಳಲ್ಲಿ ಏನಿದೆ? ಅದು ಕಲೋಪಾಸಕನ ದೇವಮಂದಿರವಾಗಿ ಉಳಿದಿಲ್ಲ. ಮನಸ್ಸನ್ನು ವಿಕೃತಗೊಳಿಸುವ ಸಂಗತಿಗಳಿಂದ ತುಂಬಿದೆ. ಸಾಹಿತ್ಯ ಸಭೆಗಳು ಮತ್ಸರಸಭೆಗಳಾಗಿವೆ. ಒಟ್ಟಿನಲ್ಲಿ ಗ್ರಾಮ–ನಗರ–ಗಿರಿ–ಕಾನನದಲ್ಲಿನ ಸೊಬಗು ದೂರವಾಗುತ್ತಿದೆ.

ಈ ಕೆಟ್ಟ ಪರಿಸರವನ್ನು ದೂರ ಮಾಡಿ ಎಲ್ಲೆಡೆ ಸುಂದರ ಪುಷ್ಪಗಳನ್ನು ಅರಳಿಸುವವರು ಬೇಕಾಗಿದ್ದಾರೆ. ಸುಂದರ ಕಲ್ಪನೆಗಳ ಆಗರವಾಗಬಲ್ಲ, ಇಡೀ ಪರಿಸರವನ್ನು ಸುಂದರಗೊಳಿಸಬಲ್ಲ ಮಾತು, ಕೃತಿಗಳಿಂದ ಸುಂದರ ವಾತಾವರಣ ಮಾಡಿಸಬಲ್ಲ –ಅದಕ್ಕಾಗಿ ದೃಢನಿಶ್ಚಯದಿಂದ ಕಲೋಪಾಸನೆ ನಡೆಸುವವರ ಅಗತ್ಯವಿದೆ.

ನಮ್ಮ ಕರ್ಮ, ವಾಣಿ, ಮನಸ್ಸು ವಿಚಾರ, ಎಲ್ಲವೂ ಸುಂದರವಾಗಬೇಕು. ಈ ದೃಷ್ಟಿಯಿಂದ ಬದುಕಿನ ಎಲ್ಲ ಕ್ಷೇತ್ರಗಳಲ್ಲಿ ಸೌಂದರ್ಯದ ಉಪಾಸನೆ ನಡೆಯುವಂತಾಗಲಿ, ಎಲ್ಲೆಡೆ ಆನಂದವೇ ಚಿಮ್ಮಲಿ, ಇದೆಲ್ಲ ಭಾರತೀಯ ದೃಷ್ಟಿ.

(11 ನೇ ಪುಟದಿಂದ)

ಉಚ್ಚೈರ್ಭಾಷಾ ಮಿಥ್ಯೋ ಜಲ್ಪಃ
ರೋದನಾನಿ ಚ ವಿಗ್ರಹಃ ।
ನಿಗ್ರಹಾನುಗ್ರಹೇ ಚೈವ
ನೃಷು ಚ ಕ್ರೂರಭಾಷಣಂ ॥

ಕಾಲು ಚಾಚುವುದು, ಕುಕ್ಕುರುಗಾಲಿನಲ್ಲಿ ಕೂರುವುದು, ಮಲಗುವುದು, ತಿನ್ನುವುದು, ಸುಳ್ಳು ಹೇಳುವುದು, ಗಟ್ಟಿಯಾಗಿ ಮಾತನಾಡುವುದು, ಹರಟುವುದು, ಅಳುವುದು, ಜಗಳಮಾಡುವುದು, ನಿಗ್ರಹ-ಅನುಗ್ರಹ, ಕ್ರೂರವಾಗಿ ಮಾತನಾಡುವುದು.

ಕಂಬಲಾವರಣಂ ಚೈವ
ಪರನಿಂದಾ ಸ್ತುತಿಃ ತಥಾ ।
ಅಶ್ಲೀಲ ಭಾಷಣಂ ಚೈವ
ಅಧೋವಾಯು ವಿಮೋಕ್ಷಣಂ ।
ಶಕ್ತೌ ಗೌಣೋಪಚಾರಂ ಚ
ಅನಿವೇದಿತ ಭಕ್ಷಣಂ ।
ತತ್ತತ್ಕಾಲೋದ್ಭವಾನಾಂ ಚ
ಫಲಾದೀನಾಮಸಮರ್ಪಣಂ ॥

ಕಂಬಳಿಯನ್ನು ಹೊದ್ದುಕೊಳ್ಳುವುದು, ಇನ್ನೊಬ್ಬರ ನಿಂದೆಸ್ತುತಿಗಳು, ಅಮಂಗಳಕರವಾಗಿ ಮಾತನಾಡುವುದು, ಅಪಾನವಾಯುವನ್ನು ಬಿಡುವುದು, ಶಕ್ತಿಯಿದ್ದಷ್ಟು ಉಪಚರಿಸದಿರುವುದು, ನೈವೇದ್ಯಮಾಡದ್ದನ್ನು ತಿನ್ನುವುದು, ಕಾಲಕಾಲದ ಫಲ-ಪುಷ್ಪಾದಿಗಳನ್ನು ಸಮರ್ಪಿಸದಿರುವುದು.

ವಿನಿಯುಕ್ತಾವಶಿಷ್ಟಸ್ಯ
ಪ್ರದಾನಂ ವ್ಯಂಜನಾದಿಕೇ ।
ಪೃಷ್ಠೀಕೃತ್ಯಾಸನಂ ಚೈವ
ಪರೇಷಾಮಭಿವಾದನಂ ।
ಗುರೌ ಮೌನಂ ನಿಜಸ್ತೋತ್ರಂ
ದೇವತಾನಿಂದನಂ ತಥಾ ।
ಅಪರಾಧಾಸ್ತಥಾ ವಿಷ್ಣೋ-
ರ್ದ್ವಾತ್ರಿಂಶತ್ಪರಿಕೀರ್ತಿತಾಃ ॥

ವಿನಿಯೋಗಿಸಿ ಉಳಿದ ಆಹಾರಪದಾರ್ಥಾದಿಗಳನ್ನು ನಿವೇದಿಸುವುದು, ಬೆನ್ನುಹಾಕಿ ಕೂರುವುದು, ಬೇರೆಯವರಿಗೆ ನಮಸ್ಕರಿಸುವುದು, ಹಿರಿಯರ ವಿಷಯದಲ್ಲಿ ಮೌನತಾಳುವುದು, ತನ್ನನ್ನು ಸ್ತುತಿಸಿಕೊಳ್ಳುವುದು, ದೇವತೆಯನ್ನು ನಿಂದಿಸುವುದು-ಇವು ಮೂವತ್ತೆರಡು ಭಗವದಪರಾಧಗಳು.

ಭಗವತ್ಸನ್ನಿಧಿಗಳಲ್ಲಿ, ದೇವಾಲಯಗಳಲ್ಲಿ ಭಗವಂತನ ದರ್ಶನಾದಿ ಕೈಂಕರ್ಯಕ್ಕೆ ಹೋದ ಭಕ್ತನು ಇಂತಹ ಹಲವಾರು ಅಪರಾಧಗಳನ್ನು ಮಾಡುತ್ತಿರುವುದು ನಮಗೆ ನಿತ್ಯದ ಅನುಭವವಾಗಿದೆ. ಅಲ್ಲಿ ಭಗವಂತನ ಅನನ್ಯಚಿಂತನೆ ಅತ್ಯಗತ್ಯ, ಹಾಗಾದಲ್ಲಿ ಮಾತ್ರ-

ಅನನ್ಯಾಃ ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಂ ॥

ಎಂಬ ಭಗವಂತನ ಅಭಯವಚನದಂತೆ, ಅವರ ಯೋಗಕ್ಷೇಮವನ್ನು ಭಗವಂತನೇ ಕರುಣಿಸುತ್ತಾನೆ. ★

---

(10ನೇ ಪುಟದಿಂದ)

ಗಳಲ್ಲಿ ಬಿಜಯಮಾಡಿರುವ ಅರ್ಚಾಮೂರ್ತಿಗಳ ವೈಭವವನ್ನು ಕೊಂಡಾಡಿರುವುದಲ್ಲದೆ, ಅಲ್ಲಿಯ ದೇವಾಲಯಗಳ ಗೋಪುರ, ಪ್ರಾಕಾರಗಳನ್ನು ಕಟ್ಟಿಸಿದ್ದಾರೆ. ಅವರ ಪ್ರವಾಸಕಾಲದಲ್ಲಿ ಸಿಕ್ಕಿದ ಚಿನ್ನದ ಪ್ರತಿಮೆಯೊಂದನ್ನು ವಿಕ್ರಯಮಾಡಿ ಬಂದ ಹಣದಿಂದ ತಮ್ಮ ಜನ್ಮಸ್ಥಾನವಾದ ತಿರುನಗರಿಯಲ್ಲಿ ಕಲ್ಯಾಣ ರಂಗನಾಥಸ್ವಾಮಿಯ ದೇವಾಲಯವನ್ನು ಕಟ್ಟಿಸಿ, ವಿಗ್ರಹ ಪ್ರತಿಷ್ಠೆ ಮಾಡಿಸಿ, ಉತ್ಸವಾದಿಗಳನ್ನು ವ್ಯವಸ್ಥೆ ಪಡಿಸಿದರು. ಶ್ರೀರಂಗದಲ್ಲಿಯೂ ಆಳ್ವಾರರು ಅಲ್ಲಿಯ ದೇವಾಲಯ ಪುನರ್ನಿರ್ಮಾಣ ಕಾರ್ಯವನ್ನು ಕೈಗೊಂಡು, ಅಧ್ಯಯನೋತ್ಸವವನ್ನು ಬಹುಚೆನ್ನಾಗಿ ನಡೆಯುವಂತೆ ಏರ್ಪಡಿಸಿದರು. ವೇದ, ಪ್ರಬಂಧ ಪಾರಾಯಣ ಕಾಲ್ಲದಲ್ಲಿ ಅವರು ಭಕ್ತರಿಗೆ ಕೊಡುತ್ತಿದ್ದ ಸಂಭಾವನೆ, ಮತ್ತು ಇತರ ಅನುಕೂಲಗಳು ಸರ್ವೋತ್ತಮರೀತಿಯದಾಗಿರುತ್ತಿದ್ದುವು.

ತಿರುಮಂಗೈ ಆಳ್ವಾರರು ಬಹು ಭಕ್ತಿಯಿಂದ ನಡೆಸಿದ ವೈಭವಯುತ ಕೈಂಕರ್ಯಾದಿಗಳಿಂದ ಪ್ರೀತನಾದ ರಂಗನಾಥ ಸ್ವಾಮಿಯು ಆಳ್ವಾರರ ಅಂತ್ಯ ಅಭಿಲಾಷ ಏನೆಂದು ಕೇಳಿದನಂತೆ. ಆಗ ಆಳ್ವಾರರು 'ಸ್ವಾಮಿಯ ದಶಾವತಾರಗಳನ್ನು ದರ್ಶನ ಮಾಡಬೇಕೆಂ'ಬ ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದರಂತೆ. ಅವರ ಪ್ರಾರ್ಥನೆಯ ಪ್ರಕಾರ, ಸ್ವಾಮಿಯು ತನ್ನ ಅವತಾರಗಳ ದರ್ಶನಭಾಗ್ಯವನ್ನು ಕರುಣಿಸಿದನು. ಮುಂದಿನ ಪೀಳಿಗೆಯ ಭಕ್ತರಿಗೂ ಆ ಭಾಗ್ಯ ದೊರೆಯುವಂತೆ, ಆ ಅರ್ಚಾಮೂರ್ತಿಗಳ ವಿಗ್ರಹಗಳು ಶಾಶ್ವತವಾಗಿ ಆರಾಧಿಸಲ್ಪಡುವಂತೆ ಅನುಗ್ರಹಿಸಿದನು. ಶ್ರೀರಂಗದ ದಶಾವತಾರ ಸನ್ನಿಧಿಯಲ್ಲಿ ಈಗಲೂ ಈ ಮೂರ್ತಿಗಳು ಪ್ರಕಾಶಿಸುತ್ತಿರುವುದನ್ನು ನೋಡಬಹುದು.

ಹೀಗೆ ತಿರುಮಂಗೈ ಆಳ್ವಾರರು ಸಾಮಾನ್ಯ ಕುಟುಂಬ ಒಂದರಲ್ಲಿ ಜನಿಸಿ ಪರಮಭಾಗವತರಾಗಿ ಪರಿವರ್ತಿತರಾಗಿ ಪರಮಾತ್ಮನ ನಿರ್ಹೇತುಕ ಕೃಪೆಗೆ ಪಾತ್ರರಾಗಿ ಭಕ್ತ ಭಂಡಾರವನ್ನು ವೃದ್ಧಿಪಡಿಸಿದರು. ಪರಮಾತ್ಮನ ಸ್ವರೂಪ, ರೂಪ ಗುಣ, ವಿಭವ, ಐಶ್ವರ್ಯಾದಿಗಳನ್ನು ಬಹುವಾಗಿ ಪ್ರಚಾರಮಾಡಿದರು. ಸಾವಿರಾರು ದಿವ್ಯಪದ್ಯಗಳನ್ನು ಹಾಡಿ, ತಮ್ಮ ಅನುಭವವನ್ನು ವಿವರಿಸಿ ಭಕ್ತರಿಗೆ ಮಾರ್ಗದರ್ಶನ ಮಾಡಿದರು. ಆಳ್ವಾರರ ದಿವ್ಯಜೀವನ ಚರಿತ್ರೆಯನ್ನು ತಿಳಿದು ಕೊಳ್ಳುವುದರಿಂದ ಬಾಳು ಭವ್ಯವಾಗುವುದಲ್ಲದೆ, ಅವರ ದಿವ್ಯಪ್ರಬಂಧಗಳ ಪರಿಚಯದಿಂದ ಮೋಕ್ಷ ಪಡೆಯಬಹುದು.

ಕಲಯಾಮಿ ಕಲಿಧ್ವಂಸಂ
ಕವಿಂ ಲೋಕ ದಿವಾಕರಂ ।
ಯಸ್ಯಗೋಭಿಃ ಪ್ರಕಾಶಾಭಿ
ರಾವಿದ್ಧಂ ನಿಹಿತಂ ತಮಃ ॥



(8 ನೇ ಪುಟದಿಂದ)

1509–70) ಇಹಲೋಕವಾಸ ಮಾಡಿದನೆಂದು ಇತಿಹಾಸ ಕಾರರು ಹೇಳುತ್ತಾರೆ. ಕನಕದಾಸನು ಪವಾಡ ಪುರುಷನೆಂದು ತಿಳಿಸುವ ಅನೇಕ ಕಥೆಗಳು ಬಳಕೆಯಲ್ಲಿವೆ.

## ಪವಾಡಗಳು :

ಒಮ್ಮೆ ಕನಕನು ಉಡುಪಿ ಯಾತ್ರೆ ಹೋದಾಗ ಶೂದ್ರನಾದುದರಿಂದ ಆಲಯ ಪ್ರವೇಶ ಸಿಗದೆ ಗರ್ಭಗುಡಿಯ ಹಿಂದೆ (ಪಶ್ಚಿಮಭಾಗದಲ್ಲಿ) ನಿಂತು ಆರ್ತಿಯಿಂದ "ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ" ಎಂಬ ಕೀರ್ತನೆ ಹಾಡಿದ ನಂತೆ. ಆಗ ದೇವರು ಕರುಣಾಮಯನಾಗಿ ಸರ್ರನೆ ಹಿಂದಕ್ಕೆ ತಿರುಗಿದ್ದಲ್ಲದೆ ಗೋಡೆಯಲ್ಲಿ ಕಿಂಡಿ ಉತ್ಪನ್ನವಾಯಿತಂತೆ. ಅದಕ್ಕೆ 'ಕನಕನ ಕಿಂಡಿ' ಎಂಬ ಹೆಸರಾಗಿದೆ. ಇಂದಿಗೂ ಕನಕನ ಕಿಂಡಿಯಿಂದಲೇ ಭಕ್ತರು ಭಗವಂತನ ಪ್ರಥಮ ದರ್ಶನ ಪಡೆಯುವುದುಂಟು. ತಿರುಪತಿ, ವಿಜಯನಗರ ಮುಂತಾದ ಸ್ಥಳಗಳಲ್ಲಿಯೂ ಕನಕನು ಪವಾಡಗಳು ನಡೆಸಿದಂತೆ ತಿಳಿಯುತ್ತಿದೆ ಅವನು ಅದ್ಭುತವಾದ ಭಕ್ತಿ ಪ್ರಶಸ್ತಿಗಳುಳ್ಳ ಮಹನೀಯನೆಂಬುದೇ ಪವಾಡ ಕಥೆಗಳ ಪರಮಾರ್ಥವಾಗಿದೆ.

## ಸಾಹಿತ್ಯ ಕಾವ್ಯಗಳು :

ಕನಕದಾಸನು ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿಭಕ್ತಿಸಾರ–ಎಂಬ ಕಾವ್ಯಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಮೊದಲಿನದು ಸಾಂಗತ್ಯಕಾವ್ಯ, ಮಿಕ್ಕವು ಷಟ್ಪದೀಕಾವ್ಯಗಳು. ಇಂದು ಮೊದಲಿನ ಎರಡಕ್ಕೂ ಅಷ್ಟಾಗಿ ಪ್ರಚಾರವಿಲ್ಲ. ಮಿಕ್ಕ ಎರಡೂ ವಿಶೇಷ ಪ್ರಚಾರವುಳ್ಳ ಜನಪ್ರಿಯ ಕಾವ್ಯಗಳು.

ಮೋಹನ ತರಂಗಿಣಿಯನ್ನು ಹರಿವಂಶ ಪುರಾಣದ ಕೆಲವು ಕಥೆಗಳ ಆಧಾರದಿಂದ ಸ್ವತಂತ್ರರೀತಿಯಲ್ಲಿ ಬರೆಯಲಾಗಿದೆ. ಇದರಲ್ಲಿ ಸಮಕಾಲೀನ ಸಮಾಜ ಚಿತ್ರಣ ಸೇರಿರುವುದು ಒಂದು ವಿಶೇಷ. ಹರಿಹರರು ಸಮಾನರೆಂದು ಇದರಲ್ಲಿ ಪ್ರತಿಪಾದಿತವಾಗಿದೆ. ಇದು ಶೃಂಗಾರ ಪ್ರಧಾನ ಕಾವ್ಯ; ರಾಮಾನುಜಾಚಾರ್ಯರನ್ನು, ತಿರುಮಲೆ ತಾತಾಚಾರ್ಯರನ್ನು ಇದರಲ್ಲಿ ಸ್ತುತಿಸಲಾಗಿದೆ. ಈ ಎರಡು ಕಾರಣಗಳಿಂದ ಇದನ್ನು ಬರೆದಾಗ ಕನಕನು ತರುಣನೆಂದು ಊಹಿಸಲಾಗಿದೆ. ಕನಕನ ಭಕ್ತಿ ವೈರಾಗ್ಯಗಳು ಪಕ್ವವಾಗದ ಪೂರ್ವಸ್ಥಿತಿ ಇದರಲ್ಲಿ ಕಾಣಲಾಗುವುದು. ರಾಮಧಾನ್ಯ ಚರಿತ್ರೆ ಕಲ್ಪಿತ ಕಥೆಯುಳ್ಳ ಚಮತ್ಕಾರಯುತವಾದ ಖಂಡ ಕಾವ್ಯ. ಭತ್ತಕ್ಕಿಂತಲು ರಾಗಿಯೇ ಶ್ರೇಷ್ಠವೆಂದು ಶ್ರೀರಾಮಚಂದ್ರ ತೀರ್ಮಾನಿಸಿರುವುದು ಇದರ ಸಾರಾಂಶ, ಇದರಲ್ಲಿ ಆತ್ಮ ಸಾರವುಳ್ಳ ಸರಳ ಜೀವಿಗಳೇ ಭಗವಂತನ ಒಲವಿಗೆ ಪಾತ್ರರೆಂಬ ಧ್ವನಿ ವ್ಯಕ್ತವಾಗುವುದು.

ನಳ ಚರಿತ್ರೆ ಸುಮಧುರ ಪ್ರಣಯ ಜೀವನ ಕಾವ್ಯ. ವಿಧಿಕೃತವಾದ ಕಷ್ಟ ಕಾರ್ಪಣ್ಯಗಳೇನೇ ಬರಲಿ ಎದೆಗುಂದದೆ ಧರ್ಮಾವಲಂಬನದಿಂದ ಜಯಿಸ ಬೇಕೆಂಬುದು ಇದರ ಸಂದೇಶವಾಗಿದೆ. ಕನಕನ ಭಕ್ತಿ ವೈರಾಗ್ಯಗಳು ವಿಕಾಸೋನ್ಮುಖವಾದ ಸ್ಥಿತಿ ಇದರಲ್ಲಿ ಕಾಣಲಾಗುವುದು. ಹರಿಭಕ್ತಿ ಸಾರವು ಭಕ್ತಿ ನೀತಿ ವೈರಾಗ್ಯ ಭಾವ ಬಂಧುರವಾದ ಮೃದು ಮಧುರ ಶೈಲಿಯ ಶತಕ. ಮಾಧ್ವ ಮತಪ್ರಭಾವವು ಗಾಢವಾಗಿ ನೆಲೆಸಿದ ನಂತರವೇ ಇದನ್ನು ಬರೆದಂತೆ ತೋರುವುದು. ಕನಕನ ಆಧ್ಯಾತ್ಮಿಕ ವಿಕಾಸವಿದರಲ್ಲಿ ಕಾಣಲಾಗುವುದು.

## ಕೀರ್ತನೆಗಳು :

ಸರ್ವಜನರಂಜಕವಾಗಿ ಕನಕನು ಸಾಕಾದಷ್ಟು ಪದಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಅವನ ಭಕ್ತಿ ಭಾಗೀರಥಿ ಉಕ್ಕಿ ಹರಿದಿದೆ. ನೀತಿ ನಿಷ್ಠೆಯ ತತ್ತ್ವವು ತುಂಬಿ ತುಳುಕಿದೆ. ವೈರಾಗ್ಯ ತತ್ತ್ವವು ಪರಮಾವಧಿಗೇರಿದೆ. ವಿಶಾಲ ಮನೋಭಾವದಿಂದ ಕೂಡಿದ ಸಮಾಜ ಸುಧಾರಕ ತತ್ತ್ವವು ಸುಶೋಭಿತವಾಗಿದೆ. ಲೋಕ ಕಲ್ಯಾಣದಾಯಕವಾದ ಸಂದೇಶಾಮೃತವು ಪ್ರತಿ ಹಾಡಿನಲ್ಲಿಯು ಪ್ರಸ್ಫುಟವಾಗಿ ಮೂಡಿ ಬಂದಿದೆ. 'ಕನಕನ ಮುಂಡಿಗೆ' ಎಂದು ಹೆಸರಾದ ಗೂಢಾರ್ಥ ತುಂಬಿದ ಹಾಡುಗಳನ್ನು ಕೂಡ ಕೆಲವು ಬರೆದಿದ್ದಾನೆ. 'ಒಂಭತ್ತು ಹೂವಿಗೆ ಒಂದೇ ನಾಳವು', 'ಮರವನು ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ'–ಇಂತಹ ಕೀರ್ತನೆಗಳು ಆಧ್ಯಾತ್ಮಿಕ ಸಂಪನ್ನರಿಗೆ ಮಾತ್ರವೇ ಅರ್ಥವಾಗತಕ್ಕವಾಗಿವೆ. ಕನಕನು ತನ್ನ ಆಧ್ಯಾತ್ಮಿಕ ಸಿದ್ಧಿಯನ್ನು, ಜೀವನ ಸೂತ್ರಗಳನ್ನೂ ಕೆಲವು ಸ್ವೀಯ ಚರಿತ್ರಾಂಶಗಳನ್ನೂ ತನ್ನ ಪದಗಳಲ್ಲೆಲ್ಲ ಅಭಿವ್ಯಕ್ತಗೊಳಿಸಿದ್ದಾನೆ. ಅವನ ವಿಶಿಷ್ಟ ವ್ಯಕ್ತಿತ್ವವು ಎಲ್ಲೆಡೆ ಎದ್ದು ಕಾಣುತ್ತಿದೆ

ಕನಕನ ಹಲವಾರು ಹಾಡುಗಳಲ್ಲಿ ವಿಷಯ ವಿಶ್ಲೇಷಣೆಗೆ ಪ್ರಾಧಾನ್ಯವಿಲ್ಲದೆ ಮಿಶ್ರ ಭಾವ ಚಾಲನವು ಕಾಣಲಾಗುವುದು ವಿಶೇಷವಾಗಿ ಭಾವ ಪುನರುಕ್ತಿಯು ವ್ಯಕ್ತವಾಗುವುದು. ಅವುಗಳಲ್ಲಿ ಅವನ ಬದುಕಿನಲ್ಲಿ ಉಂಟಾದ ಸುಖದುಃಖಾತ್ಮಕ ಘಟನೆಗಳ ಪ್ರೇರಣೆಯಿಂದ ಅಪ್ರಯತ್ನವಾಗಿ ಹೊರ ಹೊಮ್ಮಿದ ಭಾವಪ್ರವಾಹವು ಅಡೆತಡೆಯಿಲ್ಲದೆ ಹರಿದಿದೆ. ಸಹಜ ಕವಿತಾಮಾಧುರ್ಯವು ಅವುಗಳಲ್ಲಿ ಬೆಸುಗೆ ಹೊಂದಿರುವುದು ಆಮೋದಯೋಗ್ಯವಾಗಿದೆ. ಇದು ಅವನ ಅಶುಕವಿತಾ ಚಾತುರ್ಯಕ್ಕೆ ದೃಷ್ಟಾಂತ.

ಕಥಾಶ್ರಿತವಾದ ಕಾವ್ಯಗಳಿಗಿಂತಲು ಭಾವ ಗೀತೆಗಳಲ್ಲಿಯೇ ಕವಿಯ ಜೀವಿತಾದರ್ಶಗಳು ವ್ಯಕ್ತಿತ್ವದ ಜೀವನಾಡಿಯು ಮಿಡಿತವು ಯಶಸ್ವಿಯಾಗಿ ಪ್ರತಿಬಿಂಬಿಸುವುವೆಂಬುದು ಸಾಹಿತ್ಯ ತತ್ತ್ವಜ್ಞರ ಸಿದ್ಧಾಂತ. ನಮ್ಮ ವಾಗ್ಗೇಯಕಾರರ ಪದ ಸಾಹಿತ್ಯದಲ್ಲಿ ಮನೋಹರವಾದ ಭಾವಗೀತೆಗಳಿಗೆ ಪ್ರಾಧಾನ್ಯವಿರುವುದು ನಿರ್ವಿವಾದ. ಆದುದರಿಂದ ಕನಕನ ಪದಗಳಲ್ಲಿ ಕಾಣಲಾಗುವ ಮುಖ್ಯಾಂಶಗಳನ್ನು ಒಂದಿಷ್ಟು ವಿವರವಾಗಿ ಸಮೀಕ್ಷಿಸೋಣ.

## ಭಕ್ತಿ ಭವ್ಯತೆ :

ಕನಕದಾಸನ ಭಕ್ತಿ ಜ್ಞಾನ ಪ್ರಧಾನವಾದುದು. ಅವನ ಪ್ರಥಮ ಕೀರ್ತನೆ ಎಂದು ಹೇಳಲ್ಪಡುವ "ಈಶ ನಿನ್ನ ಚರಣಭಜನೆ ಆಶೆಯಿಂದ ಮಾಡುವೆನು" ಎಂಬುದರಲ್ಲಿಯೇ ಇದು ಸೂಚಿತವಾಗಿದೆ. ಇದರಲ್ಲಿ ಆತ್ಮ ಕಲ್ಯಾಣವನ್ನು ಮಾತ್ರವಲ್ಲದೆ ಲೋಕ ಕಲ್ಯಾಣವನ್ನು ಬಯಸಿದ್ದಾನೆ. ತನ್ನ ಅವಗುಣಗಳ ಪರಿಹರಿಸೆಂದು ಶ್ರೀಹರಿಯನ್ನು ಬೇಡಿದ್ದಾನೆ. 'ಪುಟ್ಟಿಸಲು ಬೇಡ ಇನ್ನು, ಪುಟ್ಟಿಸಿದಕೆ ಪಾಲಿಸಿನ್ನು' ಎಂದು ತನ್ನ ಮುಮುಕ್ಷು ಲಕ್ಷಣ ವ್ಯಕ್ತಗೊಳಿಸಿದ್ದಾನೆ.

ಹರಿಸ್ಮರಣೆ ಒಂದೇ ಸಂಸಾರ ತರಣೋಪಾಯ ಎಂಬುದು ಕನಕನ ನಿರ್ಧಾರ. ಈ ವಿಚಾರ ಅವನ ಪದಗಳಲ್ಲಿ ಅದ್ವಿತೀಯ ಮಹತ್ತ್ವ ಪಡೆದಿದೆ. ಅವನ ನೋಟದಲ್ಲಿ ಲೋಕವೆಲ್ಲವು ಹರಿಮಯವೇ. "ಎಲ್ಲರುವನೋ ರಂಗ ಎಂಬ ಸಂಶಯಬೇಡ" ಎಂಬ ಹಾಡಿನಲ್ಲಿ ಅಪರ ಪ್ರಹ್ಲಾದನಾಗಿ ನಲಿದಿದ್ದಾನೆ. ಇಂತಹ ಪರಮಾತ್ಮ ಜ್ಞಾನದಿಂದಲೇ ಅವನು ದಾಸಕೂಟದಲ್ಲಿ ಮಾನ್ಯನಾದುದನ್ನು ಇಲ್ಲಿ ಸ್ಮರಿಸಬಹುದು. "ನಾರಾಯಣ ಎಂಬ ನಾಮದ ಬೀಜವನು ನಾಲಿಗೆಯ ಕೊನೆಗೆಯ ಮಾಡಿ ಬಿತ್ತಿರಯ್ಯ" ಎಂದು ತನ್ನ ಹೆಬ್ಬಯಕೆಯ ಸಾರಿದ್ದಾನೆ.

ಹರಿಯ ಕರುಣೆಯಲ್ಲಿ ಕನಕನ ನಂಬಿಕೆ ಅಚಂಚಲವಾದುದು. "ತಲ್ಲಣಿಸದಿರು ಕಂಡ್ಯ ತಾಳು ಮನವೆ, ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ" ಎಂಬ ಹಾಡಿನಲ್ಲಿ ಸಮಸ್ತಮಾನವ ಮೃಗ ಪಕ್ಷಿ ಸಸ್ಯಾದಿಗಳನ್ನೂ ಸೃಷ್ಟಿಸಿದ ಸರ್ವೇಶ್ವರನೇ ಹೊಣೆಗಾರನಾಗಿ ಸಂರಕ್ಷಿಸುವನೆಂದು ಭರವಸೆ ನೀಡಿದ್ದಾನೆ, ಅವನ ಆಶಾವಾದಕ್ಕೆ ಇದು ಮುಕುಟಾಯಮಾನವಾಗಿದೆ.

ದೇಹಾಭಿಮಾನ ಪರಿತ್ಯಜಿಸಿ ತನ್ನ ಭಾರವೆಲ್ಲವನ್ನು ಅವನು ಭಗವಂತನಲ್ಲಿಯೇ ಹೊರಿಸಿದ್ದಾನೆ, "ತನು ನಿನ್ನದು ಜೀವನ ನಿನ್ನದು ರಂಗ, ಅನುದಿನದಲಿ ಬಾಹೋ ಸುಖ ದುಃಖ ನಿನ್ನದಯ್ಯ" ಎಂಬ ಹಾಡಿನಲ್ಲಿ ಕನಕನ ದೇಹವೇ ದೇಗುಲವಾಗಿ ಜೀವನ್ಮುಕ್ತಿ ತತ್ತ್ವವು ಭಾಸವಾಗುತ್ತಿದೆ. "ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವನು" ಎಂಬುದರಲ್ಲಿ ಭಗವಂತನ ಕೈಂಕರ್ಯ ಭಕ್ತರ ಬಾಳಿಗೆ ಪರಮಾಧಾರ ಎಂಬುವುದನ್ನು ಪರವಶನಾಗಿ ಹಾಡಿದ್ದಾನೆ.

ಪರಮಾತ್ಮನ ಒಲುಮೆ ಇಲ್ಲದ ಮಾನವರು ಏನೇ ಸಾಹಸಕಾರ್ಯ ಮಾಡಿದರೂ ಎಷ್ಟೇ ವ್ಯಥೆಪಟ್ಟರೂ ಫಲವಿಲ್ಲವೆಂದು ಕನಕನು ನಂಬಿದ್ದಾನೆ. "ಕಷ್ಟಪಟ್ಟರು ಇಲ್ಲ ಕಳವಳಿಸಿದರು ಇಲ್ಲ, ಭ್ರಷ್ಟ ಮನ ನಿನ್ನ ಹಣೆಬರಹದಷ್ಟಲ್ಲದೆ" ಎಂಬ ಹಾಡಿನಲ್ಲಿ ಸಿರಿವಂತನ ಸ್ನೇಹ, ವಿದ್ಯಾಬಾಹುಳ್ಯ, ಬುದ್ಧಿಬಲ ವಿನಮ್ರಶೀಲ, ಪ್ರಾಣಾಪಾಯಕರವಾದ ಮತ್ತು ಅದ್ಭುತವಾದ ಕಾರ್ಯದಕ್ಷತೆ ಪಡೆದವನಾದರೂ ಪ್ರಯೋಜನ ಇಲ್ಲವೆಂದೂ, ಹರಿಯ ಅನುಗ್ರಹ ಹೊಂದುವುದು ಒಂದೇ ಮಹತ್ತ್ವಪೂರ್ಣವಾದುದೆಂದೂ, ಅದು ಹಣೆಬರಹವನ್ನು ಬದಲಾಯಿಸಬಲ್ಲದೆಂದೂ ಪ್ರಕಟಿಸಿದ್ದಾನೆ.

ಆಪತ್ತುಗಳಿಂದ ಪಾರಾಗುವುದಕ್ಕೆ ಹರಿಸ್ಮರಣೆಯೇ ಹೊರತು ಬೇರೆ ದಾರಿ ಇಲ್ಲನೆಂದು ಕನಕನ ನಿರ್ಣಯ. "ಆರಿಗಾರಿಲ್ಲ ಆಪತ್ಕಾಲದೊಳಗೆ" ಎಂಬ ಹಾಡಿನಲ್ಲಿ ಹಸಿವು, ಬೇನೆ, ಭೀತಿ, ಅವಮಾನ, ಬಡತನ, ಸಿರಿತನ ಮುಂತಾದ ಎಲ್ಲ ಸಮಯಗಳಲ್ಲಿಯೂ ಶ್ರೀಹರಿಯ ನೆನೆಯುವುದೇ ಶ್ರೇಯಸ್ಕರವೆಂದು ಹೇಳಿದ್ದಾನೆ. ಇಲ್ಲಿ ಸಿರಿತನ ಕೂಡ ಆಪತ್ತಿನ ಜೊತೆಗೆ ಸೇರಿರುವುದು ಗಮನಾರ್ಹ. ಏನೆಂದು ಸ್ತುತಿಸಿಕೊಂಡಾಡಲೋ ದೇವ ಎಂಬ ಹಾಡಿನಲ್ಲಿ ಪರಮಾತ್ಮನ ಮಹದೌನ್ನತ
ಮಾನವನ ಮಹದಲ್ಪತ್ವವೂ ಸಮರ್ಪಕ
ನಿರೂಪಿತವಾಗಿವೆ.

ಕನಕನ ಭಕ್ತಿ ಪದಗಳಲ್ಲಿ "ರಾಮಗೋ
ಹರೇ ಕೃಷ್ಣ ಗೋವಿಂದ", "ಮಂದರ ಗಿ
ಪಾವನ ಇಂದಿರ ರಮಣ ಗೋವಿಂದ ಎನ್ನಿರಿ
ಇಂತಹ ಕೆಲವು ಭಗವನ್ನಾಮ ಸ್ತುತಿಗೆ ಮೀ
ಗಿವೆ. "ಯಾಕೆಲೊ ರಂಗ ನಿನಗಿಂತು ನಟ
ಮಾತು", "ಎಂಥ ಟವಳಿಗಾರನ
ಗೋಪ್ಯಮ್ಮ ಹೇಳೆ"–ಇಂತಹ ಕೆಲವು ಶ್ರೀ
ಲೀಲಾ ಕಥನಗಳಾಗಿವೆ. "ದೇವಿ ನಮ್ಮದ್ಯಾ
ಬಂದರು ಬನ್ನಿರೆ ನೋಡ ಬನ್ನಿರೆ", "ಯಾ
ಗಿರಿವಾಸನಹುದೊ ಶ್ರೀನರಸಿಂಹ", 'ಲಾಲಿ ಪಾ
ಚರಣ ಲಾಲಿ ಅಘಹರಣ, ಲಾಲಿ ವೆ
ರಮಣ ಲಲಿತ ಕಲ್ಯಾಣ'–ಇಂತಹ ಕೆಲವು
ವತಾರ ಹಾಗೂ ಅರ್ಚಾವತಾರ ವರ್ಣನೆ
ಗಿವೆ. ಅಷ್ಟೇ ಅಲ್ಲದೆ "ಸಂಸಾರ ಬಾಂಧ
ನಿಖಿಲಯಾದವರೊಳಗೆ", "ಆರು ಬದುಕಿದರ
ಹರಿ ನಿನ್ನ ನಂಬಿ"–ಮುಂತಾದ ಕೆಲವು ವ
ಸ್ತುತಿಗಳಾಗಿವೆ. "ಮುತ್ತು ಬಂದಿದೆ ಕೇರಿಗೆ ಜ
ಕೇಳಿ"–ಇಂತಹ ಕೆಲವು ಅನ್ಯಾಪದೇಶದ ಸ್ತೋ
ಗಳಾಗಿವೆ. ಈ ರೀತಿಯಾಗಿ ವೈವಿಧ್ಯಪೂರ್ಣ
ಕನಕನು ಭಕ್ತಿ ಭವ್ಯತೆಯನ್ನು ಪ್ರದರ್ಶಿಸಿದಾ

ಕನಕನು ಭಕ್ತಿಗೀತೆಗಳಲ್ಲಿ ಅನನ್ಯ ಸಾಮ
ವಾದ ತಾಳ್ಮೆ, ಹರಿಸರ್ವೋತ್ತಮದೃಷ್ಟಿ,
ಜೀವನ ತುಷ್ಟಿ, ಸದಾಚಾರ ನಿಷ್ಠೆ, ವಿಶ್ವಕಲ
ಕಾಂಕ್ಷೆ–ಮುಂತಾದ ತನ್ನ ಜೀವನ ಸೂ
ಳೊಂದಿಗೆ ಸಮನ್ವಯ ಹೊಂದಿದ ಮಾಜಾ
ಕಿಶೋರ ನಾಯಕ್ಕೆ ಸೇರಿದ ಆಧ್ಯಾತ್ಮಿಕ ಸಾ
ಯನ್ನು ಹೃದಯಂಗಮವಾಗಿ ಪ್ರತಿಪಾದಿಸಿದಾ

## ದಾಸದಾಸತ್ವ :

ದಾಸ ಜೀವನದಲ್ಲಿ ಕನಕನಿಗೆ ಅಪಾರವ
ಆನಂದವುಂಟು. ಹರಿ ಒಲುಮೆ, ಹರಿ ತೀ
ಪ್ರಸಾದ, ಹರಿ ನಾಮಾಮೃತ, ಹರಿದಾ
ಬಾಂಧವ್ಯ, ಹರಿ ಶ್ರೀಮುದ್ರೆ ಲಭಿಸಿದ ಫಲವ
ತನ್ನ ಬದುಕು ಭವ್ಯವಾದಂತೆ ಭಾವಿಸಿದಾ
"ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿ
ಎಂದು ಹರ್ಷ ಪುಲಕಿತನಾಗಿದ್ದಾನೆ. ಮ
ಯೋಗ್ಯತೆ ತನಗೆ ಸಂಪ್ರಾಪ್ತವಾದುದಲ್ಲದೆ 'ಮ
ತರಾದರು ಎನ್ನ ನೂರೊಂದು ಕುಲದವರು' ಎ
ನಂದ ಭರಿತನಾಗಿದ್ದಾನೆ.

ಕನಕನ ಭಕ್ತಿ ಭಾವದಲ್ಲಿ ಹರಿಗೆ ಹರಿದಾಸ
ನಡುವೆ ವ್ಯತ್ಯಾಸವಿಲ್ಲ, ಆದುದರಿಂದ ಹರಿದಾ
ಜೊತೆಗೆ ಹರಿದಾಸರ ದಾಸ್ಯವನ್ನೂ ಮಹಾಭಾ

ವಾಗಿ ಭಾವಿಸಿದ್ದಾನೆ. "ಸಾಕು ಸಾಕು ಮನುಜ ಸೇವೆಯು ರಂಗಯ್ಯ" ಎಂಬ ಹಾಡಿನಲ್ಲಿ ಮನುಜರಾದ ರಾಜರ ಸೇವೆಯಿಂದ ಎಳ್ಳಷ್ಟೂ ಸುಖವಿಲ್ಲವೆಂದು ನಿಶ್ಚೈಸಿ, 'ಭಕ್ತರ ಸಂಗವ' ದಯಪಾಲಿಸೆಂದು ಭಗವಂತನ ಬೇಡಿದ್ದಾನೆ. ಅದರಿಂದಲೇ 'ಬಂಧ ಪಾಶ ವಿಮುಕ್ತಿ' ಎಂದು ಸಾರಿದ್ದಾನೆ.

ಪರಮ ಧ್ಯಾನವೇ ಪರಂಧಾಮದ ಸೋಪಾನವೆಂದು ಕನಕನ ನಿರ್ಣಯ. ಆದರಿಂದ ಸಮಾಜದಲ್ಲಿ ಗೌರವಕ್ಕೆ ಧಕ್ಕೆ ಉಂಟಾದರೂ ಅವನು ಅದನ್ನು ಲೆಕ್ಕಿಸುವನಲ್ಲ. "ದಾಸ ದಾಸರ ಮನೆಯ ದಾಸಿಯಾ ಮಗ ನಾನು" ಎಂದು ಹಾಡುತ್ತಾ ಮಂಕುದಾಸ, ಮರುಳುದಾಸ, ದಾಸನಡಿದಾಸ, ಕುಲವಿಲ್ಲದದಾಸ–ಇತ್ಯಾದಿಯಾಗಿ ತನ್ನ ವಿನಯೋನ್ನತಿ ನಿವೇದಿಸಿದ್ದಾನೆ. ಅಹಂಕಾರ ಪರಿತ್ಯಾಗದಲ್ಲಿಯೇ ಹರಿಯ ಒಲವೆಂಬುದನ್ನು ಧ್ವನಿಸಿದ್ದಾನೆ. ಕನಕನು ಕೇವಲ ಮಾತಿನಲ್ಲಿ ಮಾತ್ರವಲ್ಲದೆ ತ್ರಿಕರಣಶುದ್ಧಿಯುಳ್ಳ ದಾಸದಾಸನು ಇದಕ್ಕೆ ಅವನು ಕೆಲವು ಕಾಲ ಬೇಲೂರು ವೈಕುಂಠದಾಸನ ಸೇವೆ ಸಲ್ಲಿಸಿದನೆಂಬುದನ್ನು ಇಲ್ಲಿ ಉಲ್ಲೇಖಿಸಬಹುದು.

ಹರಿದಾಸನಲ್ಲಿ ಶಿವದಾಸನಾಗಬೇಕೆಂಬ ಬಯಕೆ ಮಾಡುವುದು ವಿಲಕ್ಷಣವಾದುದು ಆದರೂ ಕನಕನು "ದಾಸನಾಗಬೇಕು ಸದಾಶಿವದಾಸನಾಗಬೇಕು" ಎಂದು ಹಾಡಿದ್ದಾನೆ. ಕ್ಲೇಶ ಕಲ್ಮಷಾದಿಗಳಿಂದ ಮುಕ್ತನಾಗಿ ಶಾಶ್ವತ ತತ್ತ್ವವರಿತು ಆದಿಕೇಶವ ದಾಸನಾಗಬೇಕೆಂದು ಆ ಹಾಡನ್ನು ಮುಗಿಸಿದ್ದಾನೆ. ಕೇಶವನೇ ಶಿವನೆಂಬ ವಿರೋಧಾಭಾಸ ಇಲ್ಲಿ ವೇದ್ಯವಾಗುವುದು. ಇದೇ ಶಾಶ್ವತ ತತ್ತ್ವವೆಂಬುದು ಕನಕನ ಹೃದಯವಾಗಿ ತೋರುವುದು. ಮೋಹನ ತರಂಗಿಣಿಯಲ್ಲಿ ಶಿವಕೇಶವರು ಸಮಾನರೆಂದು ಭಾವಿಸಿದ ಕನಕನು ಇಲ್ಲಿ ಶಿವಕೇಶವಾಭೇದವನ್ನೇ ಪ್ರತಿಪಾದಿಸಿದಂತಾಗಿದೆ. ಅವನ ಭಾಗವತ ಸೃಷ್ಟಿಗೆ ಇದು ಪರಮಲಕ್ಷ್ಯವೇ ಸರಿ.

ಜ್ಞಾನಭಕ್ತಿಯುಳ್ಳ ಕನಕನು, ಮೂಢಭಕ್ತರನ್ನು ಟೀಕಿಸದೆ ಬಿಟ್ಟಿಲ್ಲ. ಅಂತಹ ಹುಚ್ಚರು ಶಿವ ಭಕ್ತರು ಆಗಲಾರರೆಂದು ಹೇಳಿದ್ದಾನೆ. ಶಿವ ಕೇಶವರೊಂದೇ ಎಂಬ ಸೂಚನೆಯನ್ನೂ ಕೊಟ್ಟಿದ್ದಾನೆ. ಇಂತಹ ವಿಚಾರ ವಿಶೇಷದಿಂದಲೇ ಕನಕನು ವಿಶಿಷ್ಟ ರೀತಿಯ ದಾಸನಾಗಿದ್ದಾನೆ.

## ವೈರಾಗ್ಯ ವೈಭವ :

ಕನಕನು ಅಸಾಧಾರಣ ವೈರಾಗ್ಯ ಸಂಪನ್ನನು. ಸಮಸ್ತ ಲೋಕವೂ ಕೇವಲ ಕಪಟ ನಾಟಕವೆಂದು ತೀರ್ಮಾನಿಸಿದ್ದಾನೆ. ಈ ವಿಚಾರವನ್ನು ಹಲವಾರು ಹಾಡುಗಳಲ್ಲಿ ಮನಮುಟ್ಟುವಂತೆ ಬಣ್ಣಿಸಿದ್ದಾನೆ. ಐಹಿಕ ಜೀವನವು, ಐಶ್ವರ್ಯವು ಅಸ್ಥಿರವೆಂಬುದನ್ನು ಸಾರಿಸಾರಿ ಹೇಳಿದ್ದಾನೆ. "ಆರೂ ಸಂಗಡ ಬಾರೋರಿಲ್ಲ" ಎಂಬ ಹಾಡಿನಲ್ಲಿ ಉಸಿರು ಹೋದ ಕೂಡಲೆ 'ಹಿತ್ತಿಲಾ ಕಸಕಿಂತ ಅತ್ತತ್ತ ಈದೇಹ' ಎಂದು ವಿಶದಪಡಿಸಿದ್ದಾನೆ. ತಾಯಿ ತಂದೆ ಬಂಧು ಬಳಗ ಕೂಡೆ ಬಾರದೆ ಇರುವು ಸಂತಿರಲಿ, ಕೈಹಿಡಿದವಳು ತನಗೆ ಗತಿಯಾರೆಂದು ಗೋಳಾಡುವುದು, ಆಸ್ತಿಗಾಗಿ ಮಕ್ಕಳು ಬಡಿದಾಡುವುದು, ಆಪ್ತರೇ ಹೆಣವನ್ನು ಹೊರಗೆ ಹಾಕಿಸಿ ಬೆಂಕಿಯಲ್ಲಿ ಬಿಸಾಡುವುದು–ಇವೆಲ್ಲವೂ ಸ್ವಾಭಾವಿಕವಾಗಿ ಚಿತ್ರಿಸಿದ್ದಾನೆ. "ಎಂದಿದ್ದರೀ ಕೊಂಪೆ ಎನಗೆ ನಂಬಿಕೆ ಇಲ್ಲ" ಎಂಬ ಹಾಡಿನಲ್ಲಿ ದೇಹದ ನಶ್ವರತೆಯ ಸ್ಪಷ್ಟ ಚಿತ್ರಣ ಮಾಡಿದ್ದಾನೆ.

ಲೋಕದ ಭೋಗ ಭಾಗ್ಯಗಳೆಲ್ಲವು ಕೇವಲ ಸ್ವಪ್ನ ಘಟನೆಗಳೆಂಬುದು ಕನಕನ ಪ್ರವಚನ. "ಧರೆಯ ಭೋಗವನ್ನು ನೋಡಿ ಹರಿಯ ಮರೆದು ಕೆಡಲು ಬೇಡ" ಎಂಬ ಹಾಡಿನಲ್ಲಿ ಧನ ರಾಜ್ಯಸತಿ ಸುತಾದಿಗಳಿಂದ ಉಂಟಾಗುವ ಮುದವೆಲ್ಲವು ತಿರುಕನ ಕನಸಿನಂತೆ ಅಸಂಬದ್ಧವೆಂದು ಸುದೀರ್ಘವಾಗಿ ವರ್ಣಿಸಿದ್ದಾನೆ. "ಗಾಳಿಗೊಡ್ಡಿದ ಸೊಡರು ಈ ಸಂಸಾರ" ಎಂಬ ಹಾಡಿನಲ್ಲಿ ಸಂಸಾರದ ಕ್ಷಣಿಕತೆಯನ್ನು ನಿರೂಪಿಸಿದ್ದಾನೆ.

ಪ್ರತಿಜೀವಿಯೂ ತನ್ನ ಪರಂಪರೆಯ ಮಾರ್ಗದಲ್ಲಿ ನಿತ್ಯ ಪ್ರಯಾಣಿಕನೆಂದು ಕನಕನ ನಿರ್ಧಾರ "ಎಲ್ಲಿಂದ ಬಂದೆ ಮುಂದೆತ್ತಣ ಪಯಣ, ಇಲ್ಲಿ ನಿನಗೆಷ್ಟುದಿನವಾಲಸ್ಯ ಮರುಳೆ" ಎಂಬ ಹಾಡಿನಲ್ಲಿ ದುಃಖಮಯವಾದ ಐಹಿಕ ಜೀವನ ಚಿತ್ರಿಸಿದ್ದಾನೆ. ನಂತರ ಈ ಜನ್ಮದಿಂದ ಸಾಧಿಸಿದ್ದೇನು? ನಿನ್ನ ಜಾತಿ ಏನು? ಹೆಸರೇನು?–ಇಂತಹ ಪ್ರಶ್ನೆಗಳ ಸುರಿದು, ಆತ್ಮ ವಿಚಾರದತ್ತ ದಾರಿ ತೋರಿದ್ದಾನೆ.

ತ್ಯಾಗದಿಂದಲೇ ವೈರಾಗ್ಯವು ಪರಿಪುಷ್ಟವಾಗುವುದು; ಅಲ್ಲದೆ ಸಮಾಜಕ್ಕೆ ಶ್ರೇಯವೂ ಕೈಗೂಡುವುದೆಂದು ಕನಕನು ನಂಬಿದ್ದಾನೆ. ತ್ಯಾಗದ ಹಿರಿಮೆಯನ್ನು ಕುರಿತು ಅನೇಕ ಪದಗಳಲ್ಲಿ ಹಾಡಿದ್ದಾನೆ. "ಏನು ಬರುವುದೋ ಸಂಗಡೇನು ಬರುವುದೋ, ದಾನ ಧರ್ಮವ ಮಾಡಿ ಬಹು ನಿಧಾನಿ ಎನಿಸಿಕೊಳ್ಳೊ" ಎಂಬ ಹಾಡಿನಲ್ಲಿ ತ್ಯಾಗದಿಂದ ಬರುವ ಪುಣ್ಯಫಲದ ಬಗ್ಗೆ ವಿವರಿಸಿ, 'ಪೊಂದಿ ಕೊಂಡು ಬರುವ ವಸ್ತು ಕೀರ್ತಿ ಅಪಕೀರ್ತಿ ಎರಡೆ' ಎಂದು ಪ್ರಕಟಿಸಿದ್ದಾನೆ. ಮಾನವನು ಬತ್ತಲಾಗಿ ಬಂದು ಬತ್ತಲಾಗಿ ಮಣ್ಣಾಗುವುದನ್ನು ಕಣ್ಣಿಗೆ ಕಟ್ಟಿದಂತೆ ಬಣ್ಣಿಸಿದ್ದಾನೆ "ಏನು ಇಲ್ಲದ ಎರಡು ದಿನ ಸಂಸಾರ" ಎಂಬ ಹಾಡಿನಲ್ಲಿ ಜನ್ಮಚರಿತಾರ್ಥವಾಗುವುದಕ್ಕೆ ಮಾಡಬೇಕಾದ ದಾನಗಳನ್ನು ಸಾಧುವರ್ತನೆಯನ್ನು ವಿಶದೀಕರಿಸಿದ್ದಾನೆ. "ಈ ಸಿರಿಯ ನಂಬಿ ಹಿಗ್ಗಲು ಬೇಡ ಮನವೆ" ಎಂಬ ಹಾಡಿನಲ್ಲಿ ಮಡದಿ ಮಕ್ಕಳು ಸಂಪತ್ತು–ಇವೆಲ್ಲವು ಮಾಯವೆಂದು ತಿಳಿಯ ಹೇಳಿ, 'ಇಷ್ಟ ಸಂಪತ್ತನ್ನು ಬಡವರಾ ಕರೆತಂದು ಕೊಟ್ಟು ಮಾಡಿದ ಪುಣ್ಯ ತನ್ನದು' ಎಂದು ಸಾರಿದ್ದಾನೆ. ವಿರಕ್ತನಾದ ಕೂಡಲೆ ಕನಕನು ಮಾಡಿದ ಸರ್ವಸ್ವತ್ಯಾಗವನ್ನು ಇಲ್ಲಿ ಸ್ಮರಿಸಬಹುದು.

ಕನಕನ ವೈರಾಗ್ಯ ಸಂದೇಶಕ್ಕೆ ಪರಮಾವಧಿಯಾಗಿ "ಆಶೆ ತರವಲ್ಲ ದಾಸನಾಗೊ ಭವಪಾಶ ನೀಗೊ" ಎಂಬ ಹಾಡು ಮೂಡಿಬಂದಿದೆ. ಇದರಲ್ಲಿ ಶರೀರವು ತಾನಲ್ಲ, ತನ್ನದಲ್ಲ, ನಿತ್ಯವಲ್ಲ–ಈರೀತಿ ಮುಂದುವರಿದು ಲೋಕದ ಅಜ್ಞಾನತಿಮಿರ ನಿರ್ಮೂಲನೆಗೆ ಜ್ಞಾನಜ್ಯೋತಿ ಬೆಳಗಿದ್ದಾನೆ. "ಸಂಸಾರ ಸಾಗರವ ನುತ್ತರಿಸುವೊಡೆ, ಕಂಸಾರಿ ನಾಮವೊಂದೇ ಸಾಕು" ಎಂದು ಸಕಲ ಜನರಿಗೆ ಸುಲಭವಾದ ತರಣೋಪಾಯ ತೋರಿದ್ದಾನೆ. ತೀರ್ಥ ಸಂದರ್ಶನ ಮಾಡಿದವನಾಗಿಯೂ ಕನಕದಾಸನು ಹೀಗೆ ಹೇಳಿರುವುದು ಗಮನಾರ್ಹವಾಗಿದೆ. ಹೆಚ್ಚು ಪರಿಣಾಮಕಾರಿಯಾದ ಹರಿಸ್ಮರಣೆಗೆ ಅವನು ಕೊಟ್ಟ ಮಹತ್ತ್ವವಿಲ್ಲಿ ಸ್ಪಷ್ಟವಾಗುವುದು.

(ಸಶೇಷ)

23 ರಾಗ – ಜಗನ್ಮೋಹಿನಿ

ದೇವಿ ಜಗಜ್ಜನನೀ ಜಗನ್ಮೋಹಿನಿ
ತಿರುಪತೀಶ ವೆಂಕಟರಮಣನ ಪ್ರಿಯೆ
ಜಗದೊಳು ನಿನ್ನ ಸಾಟಿಯುಂಟೇ ದೇವಿ
ಪಾಪಂಗಳ ಪರಿಹರಿಸು ಅಲಮೇಲು ಮಂಗ ॥ ಏಳು ॥

24 ರಾಗ – ಷಡ್ವಿಧಮಾರ್ಗಿಣಿ

ಸರಸಿಜೋದ್ಭವೇ ಶ್ರೀ ವರಲಕ್ಷ್ಮಿ
ಕನಕಾಂಬರ ಧಾರಿಣಿ ಶ್ರೀ ಲಲಿತೇ
ಷಡ್ವಿಧ ಮಾರ್ಗಪಂದೋರಿ ಮುಕ್ತಿಯುಂ ನೀಡು
ಸರಸಿಜಾಕ್ಷಿ ಶ್ರೀ ಅಲಮೇಲುಮಂಗ ॥ ಏಳು ॥

25 ರಾಗ – ಶ್ಯಾಮಳಾಂಗಿ

ಕಮಲ ಪುಷ್ಪವಂ ಪೋಲುವ ನಿನ್ನ ಪಾದ ದ್ವಯಗಳು
ವಿಜಯ ಪತಾಕೆ ನಿನ್ನ ಅಭಯ ಹಸ್ತವು
ಶ್ಯಾಮಳಾಂಗಿ ಚಂದ್ರಬಿಂಬಾಧರಿ
ಸೃಷ್ಟಿ ಸ್ಥಿತಿ ಲಯಕೆ ನೀನಾಧಾರವೀಜಗಕೆ ॥ ಏಳು ॥

26 ರಾಗ – ಕಲಾವತಿ

ಅಂಬುಜಾಕ್ಷಿ ನಿನ್ನ ಅರವಿಂದ ವದನವ
ಕಂಡ ಪುನೀತರನ್ನಾಗಿಸು ಎಮ್ಮನು
ದಿವ್ಯ ದರುಶನವ ನೀಡು ಪದ್ಮಾವತಿ
ಸಕಲ ಕಲಾವತಿ ಬೇಡುವೆ ನಿನ್ನನು ॥ ಏಳು ॥

27 ರಾಗ – ಪದ್ಮಲತಾ

ಪಾಲಿಸು ಶ್ರೀದೇವಿ ಪಂಕಜ ಲೋಚನಿ
ಭೃಗು ಅತ್ರಿ ಶುಕ ಶೌನಕಾದಿ ವಂದಿತೇ
ಶೃಂಗಾರವೇಣಿ ಶ್ರೀ ಪದ್ಮಲತಾಂಗಿ
ತ್ರಿಜಗದೀಶ್ವರಿ ಸಲಹು ಎಮ್ಮನು ಬಿಡದೆ ॥ ಏ

28 ರಾಗ – ಸೂರ್ಯಕಾಂತ

ನಿನ್ನ ಕಿರುನಗೆಯು ಕೋಟಿ ಸೂರ್ಯಕಾಂತಿಯು
ನಿನ್ನ ಕಡೆಗಣ್ಣಿನ ನೋಟತಾರೆಯ ಕಿರಣ
ನಿನ್ನ ಮೃದು ಭಾಷೆಯು ಕರ್ಣಾಮೃತವು
ನಿನ್ನ ಅಭಯ ಹಸ್ತವೇ ಜಗತ್ತಿನ ಶಾಂತಿಯು ॥ ಏ

29 ರಾಗ – ಸಾವೇರಿ

ಭಕ್ತಕೋಟಿಗಳು ಕೋರಿದ ವರಂಗಳ
ನೀಡುವ ದಿವ್ಯ ಮಂಗಳೆ ಶ್ರೀ ಲಲಿತೇ
ಸಾವೇರಿರಾಗಪ್ರಿಯೆ ಪಾಪಂಗಳ ಪರಿಹರಿಸಿ
ಮುಕ್ತರನ್ನಾಗಿಸು ನಿನ್ನ ಭಕ್ತರ ॥ ಏ

30 ರಾಗ – ಶ್ರೀ

ಧನಲಕ್ಷ್ಮಿ ಧಾನ್ಯಲಕ್ಷ್ಮಿ ಜಯಲಕ್ಷ್ಮಿ ಧೈರ್ಯಲಕ್ಷ್ಮಿ
ಸಂತಾನಲಕ್ಷ್ಮಿ ಶ್ರೀ ವಿದ್ಯಾದಿ ಗಜಲಕ್ಷ್ಮಿ
ಸೌಭಾಗ್ಯದಾಯಿನಿ ಲಲಿತೆ ಪದ್ಮಾವತಿ
ಶ್ರೀರಂಗನಾಯಕಿ ಶ್ರಿತ ಫಲದಾಯಕಿ ॥ ಏ



(4 ನೇ ಪುಟದಿಂದ)

ಅಲಂಕರಿಸಿ ಮೆರವಣಿಗೆಯಲ್ಲಿ ನಾಲ್ಕು ಬೀದಿಗಳಲ್ಲಿ ಬಿಜಯಗೈಸಲಾಯಿತು.

ಗರುಡಸೇವೆಯ ದಿನದಂದು ಆಂಧ್ರ ಪ್ರದೇಶ ಸರಕಾರದ ಪರವಾಗಿ ಆಗಮಿಸಿದ ಮುಖ್ಯ ಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ಅವರು ತಿರುಪತಿಯಲ್ಲಿ ಅಲಿಪಿರಿಯಿಂದ ಶ್ರೀವಾರಿಮೆಟ್ಟುವರೆಗೆ ಹರಡುವ ಶ್ರೀ ವೆಂಕಟೇಶ್ವರ ಜೂವಲಾಜಿಕಲ್ ಪಾರ್ಕ್‌ಗೆ ಶಿಲಾನ್ಯಾಸ ಮಾಡಿದರು. ಅಲಿಪಿರಿಯ ಬಳಿ ತಿ. ತಿ. ದೇ. ಗಳು ಯಾತ್ರಿಕರಿಗಾಗಿ 40 ಲಕ್ಷ ರೂಗಳಲ್ಲಿ ನಿರ್ಮಿಸಿದ ವಿಶ್ರಾಂತಿ ಮಂದಿರ ಹಾಗೂ ಕ್ಯಾಂಟೀನ್‌ಗಳ ಆರಂಭೋತ್ಸವವನ್ನೂ, ಅಲಿಪಿರಿಯ ಬಳಿ ಒಳಚರಂಡಿ ಯೋಜನೆಗೆ ಶಿಲಾನ್ಯಾಸವನ್ನೂ ಮಾಡಿದರು. ತಿರುಮಲೆಯಲ್ಲಿ ಹೊಸದಾಗಿ ನಿರ್ಮಿಸಿದ ತಿ. ತಿ. ದೇ. ಆಸ್ಥಾನ ಮಂಟಪವನ್ನೂ ನಾರಾಯಣಗಿರಿ 3 ನೇ ಬ್ಲಾಕ್ ಅತಿಥಿಗೃಹ (ನಿರ್ಮಾಣವೆಚ್ಚ 40 ಲಕ್ಷರೂ)ವನ್ನೂ ಉದ್ಘಾಟಿಸಿದರು. ತಿರುಮಲೆಯ ಆಲಯದಲ್ಲಿ ಹೊಸದಾಗಿ ಅಲಂಕರಣಗೊಳಿಸಿದ ಮುಕುರ ಮಂಟಪದ ಆರಂಭೋತ್ಸವವನ್ನೂ ನೆರವೇರಿಸಿದರು.

ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ ಬ್ರಹ್ಮೋತ್ಸವದ ದಿನಗಳಲ್ಲಿ ಭಕ್ತರಿಂದ ಒಟ್ಟು 109 ಲಕ್ಷ ರೂಗಳ ಸಂದಾಯವಾಗಿದೆಯೆಂದು ವರದಿಯಾಗಿದೆ.

ಚಕ್ರಸ್ನಾನ ದೊಡನೆ ಶನಿವಾರ 3-10-87 ರಂದು ಮುಗಿದ ಬ್ರಹ್ಮೋತ್ಸವಗಳಲ್ಲಿ ಬಂಗಾರ ಬೆಳ್ಳಿಗಳ ಹೊರತು 57 ಲಕ್ಷ 15 ಸಾವಿರ ರೂಗಳ ನಗದು ಕಾಣಿಕೆ, ಲಾಡು ವಡೆ ಮಾರಾಟದಿಂದ 27 ಲಕ್ಷ 87 ಸಾವಿರ ರೂಗಳು, ಪ್ರತ್ಯೇಕ ಪ್ರವೇಶದ ಟಿಕೆಟ್ ಮಾರಾಟದ ಮೂಲಕ 24 ಲಕ್ಷ 81 ಸಾವಿರ ರೂಗಳು, ಲಭಿಸಿವೆಯೆಂದು ವರದಿಗಳು ತಿಳಿಸಿವೆ.

## ಸಾಲು ಮರಗಳಿಗಾಗಿ ಬೀಜವಾಪನೆ

ಅಲಿಪಿರಿಯಿಂದ ತಿರುಪತಿ ಬಸ್ ನಿಲ್ದಾಣ ರಸ್ತೆಯಲ್ಲಿ ಸಾಲು ಮರಗಳನ್ನು ಬೆಳೆಸುವ ಕಾರ್ಯಕ್ರಮವನ್ನು ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಆರಂಭಿಸಿದರು. ಮೂರು ಕಿಲೋಮೀಟರ್ ದೂರದ ಈ ರಸ್ತೆಯಲ್ಲಿ 2400 ಗಿಡಗಳನ್ನು ಬೆಳೆಸುವ ಆಲೋಚನೆಯಿದ್ದು ಸಸಿಗಳನ್ನು ನೆಡುವ ಸಂರಕ್ಷಿಸುವ ಕಾರ್ಯ ಆರಂಭವಾಗಿದೆ.

## ಹೊಸ ಸಹಕಾರ್ಯ ನಿರ್ವಹಣಾಧಿಕಾರಿ

ತಿ. ತಿ. ದೇ. ಗಳ ಸಹಕಾರ್ಯನಿರ್ವಹಣಾಧಿಕಾರಿ ವಿಶ್ವನಾಥ್ ಅವರು ಚಿತ್ತೂರು ಜಿಲ್ಲಾಧಿಕಾರಿಗಳಾಗಿ ವರ್ಗಹೊಂದಿದ ನಂತರ, ಅವರ ಸ್ಥಾನದಲ್ಲಿ ನೇಮಕವಾದ ಶ್ರೀ ಎಸ್. ರಮೇಶ ಕುಮಾರ್ ಐ ಎ ಎಸ್ ಅವರು ತಮ್ಮ ಪದವಿಯನ್ನು ಸ್ವೀಕರಿಸಿದ್ದಾರೆ.

## ವಿಶೇಷ ಪ್ರವೇಶ ಟಿಕೆಟ್ ಬೆಲೆ ಹೆಚ್ಚಳ

ತಿರುಪತಿಯ ಶ್ರೀಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಹಾಗೂ ತಿರುಚಾನೂರಿನ ಶ್ರೀ ಪದ್ಮಾ ಅಮ್ಮನವರ ದೇವಾಲಯದಲ್ಲಿ ವಿಶೇಷ ಪ್ರವೇಶದ ಟಿಕೆಟಗಳ ಬೆಲೆಯನ್ನು ರೂ 2/-ರಿಂದ ರೂ 5/ಕ್ಕೆ ಏರಿಸಲಾಗಿದ್ದು ಈ ಹೊಸ ದರಗಳು ಈಗ ಜಾರಿಯಲ್ಲಿವೆ.

ಈ ಹಿಂದೆ ತಿರುಪತಿಯ ಸ್ಥಳೀಯ ದೇವಾಲಯಗಳ ದರ್ಶನದ ಬಸ್‌ನ ಶುಲ್ಕ ರೂ 12/ ಹಾಗೂ ರೂ 6/ ಇದ್ದದ್ದು ಈ ಹೊಸ ಪ್ರವೇಶದ ಟಿಕೆಟ್‌ದರದಿಂದಾಗಿ ಹಿರಿಯರಿಗೆ ರೂ 18/ ಹಾಗೂ ಕಿರಿಯರಿಗೆ ರೂ 9/ ಆಗಿದೆ. ಈ ಹೊಸ ಶುಲ್ಕಗಳು ಈ ಕೂಡಲೇ ಜಾರಿಗೆ ಬಂದಿವೆಯೆಂದು ವರದಿಗಳು ತಿಳಿಸಿವೆ.

## ತಿ. ತಿ. ದೇ. ಆಸ್ಥಾನ ಪಂಡಿತರ ನೇಮಕಾತಿ

ತಿ. ತಿ. ದೇವಸ್ಥಾನಗಳ ಆಸ್ಥಾನ ಪಂಡಿತರನ್ನಾಗಿ ಬಾಪಟ್ಲ ತಾಲ್ಲೂಕು ಅಪ್ಪಿಕಟ್ಲ ಗ್ರಾಮದ ಶ್ರೀ ವಿ. ದೇಶಿಕಾಚಾರ್ಯರನ್ನು (ವೈಖಾನಸ ಆಗಮ) ರೇಪಲ್ಲಿ ತಾಲ್ಲೂಕಿನ ಪೆನುಮೂಡಿ ಗ್ರಾಮದ ಶ್ರೀ ಬಿ. ಲಕ್ಷ್ಮೀನರಸಿಂಹಾಚಾರ್ಯರನ್ನೂ (ಪಾಂಚರಾತ್ರಾಗಮ) ನೇಮಕ ಮಾಡಲಾಗಿದೆ.

## ತಿರುಮಲೆಯಲ್ಲಿ ಸೌರಶಕ್ತಿಯ ಗಡಿಯಾರ

ಎಚ್. ಎಂ. ಟಿಯ ಚೇರ್ಮನ್ ಶ್ರೀ ಎಂ. ಆರ್ ನಾಯುಡು ಅವರು 25000 ರೂಗಳ ಬೆಲೆಯ (ಪ್ರತಿಯೊಂದು) ಮೂರು ಸೌರಶಕ್ತಿಯ ಗಡಿಯಾರಗಳನ್ನು ತಿ. ತಿ. ದೇ. ಗಳ ಬಳಕೆಗಾಗಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿ ರಾಜು ಅವರಿಗೆ ನೀಡಿದ್ದಾರೆ.

ಇವುಗಳಲ್ಲಿ ಒಂದನ್ನು ತಿರುಮಲೆಯ ದೇವಾಲಯದ ಎದುರಿನ ಅರ್ಜಿತ ಸರ್ವಿಸ್ ಹಾಲ್‌ನಲ್ಲೂ, ಉಳಿದೆರಡನ್ನೂ ವೈಕುಂಠ ತೋರಣದ (ಕ್ಯಾಂಟೀನ್ ಕಾಂಪ್ಲೆಕ್ಸ್ ಸಮೀಪ) ಎರಡೂ ಬದಿಗಳಲ್ಲೂ ಸ್ಥಾಪಿಸಲಾಗುವುದು.

## ಹೊಸ ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ

ತಿ. ತಿ. ದೇಗಳಲ್ಲಿ ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ (ಸರ್ವೀಸಸ್) ಸ್ಥಾನಕ್ಕೆ ಆಂಧ್ರ ಪ್ರದೇಶ್ ಸರ್ಕಾರ ಶ್ರೀಮತಿ ಎಸ್. ಅರುಣ ಕುಮಾರಿ ಅವರನ್ನು ನೇಮಕ ಮಾಡಿದೆ.

ಈ ಹಿಂದೆ ಆಂಧ್ರ ಪ್ರದೇಶದ ದೇವಾಲಯದ ಇಲಾಖೆಯಲ್ಲಿ ಡೆಪ್ಯೂಟಿ ಕಮೀಷನರ್ ಆಗಿದ್ದ ಶ್ರೀಮತಿ ಎಸ್. ಅರುಣ ಕುಮಾರಿ ಅವರು ತಿ. ತಿ. ದೇ. ಗಳಲ್ಲಿ ತಮ್ಮ ಪದವಿಯನ್ನು ಸ್ವೀಕರಿಸಿದ್ದಾರೆ.

## ತಿರುಮಲೆಯಲ್ಲಿ ಮಾಜೀ ರಾಷ್ಟ್ರಪತಿ

ಮಾಜೀ ರಾಷ್ಟ್ರಪತಿ ಶ್ರೀ ನೀಲಂ ಸಂಜೀವ ರೆಡ್ಡಿ ಅವರು ಕುಟುಂಬ ಸಹಿತರಾಗಿ ಅಕ್ಟೋಬರ್ 15 ರಂದು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಆರಾಧಿಸಿದರು. ತಿರುಮಲೆಯಲ್ಲಿ ಅವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿ ರಾಜು, ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ಮುನಿಕೃಷ್ಣನ್, ಮೊದಲಾದವರು ಸ್ವಾಗತಿಸಿದರು. ಮಾಜೀ ರಾಷ್ಟ್ರಪತಿ ಕುಟುಂಬದ ಸ್ವಾಮಿ ದರ್ಶನಾನಂತರ ಅವರಿಗೆ ಆಲಯ ಅಧಿಕಾರಿ ಶ್ರೀ ಪೀರಯ್ಯ ಪ್ರಸಾದಗಳನ್ನು ನೀಡಿದರು.

## ಆಂಧ್ರಪ್ರದೇಶದ ಸಭಾಪತಿ, ಮಂತ್ರಿ

ಆಂಧ್ರಪ್ರದೇಶದ ಶಾಸನ ಸಭೆಯ ಸಭಾಪತಿ ಶ್ರೀ ಜಿ. ನಾರಾಯಣರಾವು ಹಾಗೂ ಎಕ್ಸೈಸ್ ಶಾಖಾಮಂತ್ರಿ ಶ್ರೀ ಅಶೋಕ ಗಜಪತಿ ರಾಜು ಅವರುಗಳು ತಿರುಮಲೆಯ ಬ್ರಹ್ಮೋತ್ಸವದಲ್ಲಿ ಪಾಲುಗೊಂಡರು. ಅವರನ್ನು ಗೋಕುಲಂ ಅತಿಥಿಗೃಹದ ಬಳಿ ಎ. ಇ. ಓ. ಶ್ರೀ ಆಂಜನೇಯಲು ಸ್ವಾಗತಿಸಿದರು. ಇಬ್ಬರೂ 25 ರೂಗಳ ಪ್ರತ್ಯೇಕ ಪ್ರವೇಶದ ಟಿಕೆಟ್ ಕೊಂಡು ಸ್ವಾಮಿಯನ್ನು ದರ್ಶಿಸಿದರು.

## ಹಂಪೆಯಲ್ಲಿ ಶ್ರೀಪುರಂದರ ಹಾಗೂ ವಿಜಯನಗರ ಉತ್ಸವ

ಕರ್ನಾಟಕದ ಕನ್ನಡ ಹಾಗೂ ಸಂಸ್ಕೃತಿ ಇಲಾಖೆ, ಮತ್ತು ದಕ್ಷಿಣವಲಯ ಸಾಂಸ್ಕೃತಿಕ ಕೇಂದ್ರ ತಂಜಾವೂರುಗಳ ಸಂಯುಕ್ತ ಆಶ್ರಯದಲ್ಲಿ, ಹಂಪೆಯಲ್ಲಿ ಅಕ್ಟೋಬರ್ 9 ರಿಂದ 12 ರವರೆಗೆ ಶ್ರೀ ಪುರಂದರ ಹಾಗೂ ವಿಜಯನಗರ ದಸರಾ

# ವಿದ್ವಾನ್ ವಿಶ್ವಂ ನಿಧನ

ಆಂಧ್ರಪ್ರದೇಶದ ಖ್ಯಾತ ಪತ್ರಕರ್ತ ಶ್ರೀ ವಿದ್ವಾನ್ ವಿಶ್ವಂ ಅವರು 1987 ರ ಅಕ್ಟೋಬರ್ 19 ರಂದ ರಾತ್ರಿ ತಿರುಪತಿಯಲ್ಲಿ ನಿಧನರಾದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ.

73 ವರ್ಷದ ವಿದ್ವಾನ್ ವಿಶ್ವಂ ಸ್ವಾತಂತ್ರ್ಯ ಪೂರ್ವದಲ್ಲಿಯೇ ಪತ್ರಿಕೋದ್ಯಮಿಯಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ವಿದ್ವಾಂಸರಾಗಿ ಹೆಸರು ಪಡೆದಿದ್ದವರು. ಆಂಧ್ರಪ್ರಭ ವಾರಪತ್ರಿಕೆಯಲ್ಲಿ ಮಾಣಿಕ್ಯ ವೀಣೆಯನ್ನು ಪ್ರತಿವಾರವೂ ಓದುಗರಿಗೆ ಪ್ರಿಯವಾಗುವ ರೀತಿಯಲ್ಲಿ ನುಡಿಸಿ, ನೈತಿಕ ಧಾರ್ಮಿಕ ಮಾನವೀಯ ಮಹತ್ತನ್ನು ಸಾರಿದವರು.

ತಿ.ತಿ.ದೇ. ಗಳ ಗ್ರಂಥ ಪ್ರಕಟನ ವಿಭಾಗದ ಪ್ರಧಾನ ಸಂಪಾದಕರಾಗಿ 1981 ರಿಂದ ಕೆಲಸ ನಿರ್ವಹಿಸುತ್ತಿದ್ದ ಅವರು ಕಥಾ ಸರಿತ್ಸಾಗರದ 12 ಸಂಪುಟಗಳನ್ನು ತೆಲುಗಿಗೆ ಅನುವಾದ ಮಾಡಿದ್ದು, ಅಥರ್ವಣವೇದದ ಎಂಟು ಸಂಪುಟಗಳಲ್ಲಿ 5 ಸಂಪುಟಗಳನ್ನು ಅನುವಾದ ಮಾಡಿದ್ದಾರೆ. (ಇವುಗಳಲ್ಲಿ ಮೂರು ಪ್ರಕಟವಾಗಿವೆ) ಮೇಘಸಂದೇಶ, ರಘುವಂಶ, ಕಾದಂಬರಿ ಮುಂತಾದ ಕಾವ್ಯಗಳನ್ನು ಬಹು ಹಿಂದೆಯೇ ಅನುವಾದಿಸಿದ ಘನತೆ ಅವರದಾಗಿದ್ದಿತು. ಬುದ ಜಾತಕ ಕಥೆಗಳನ್ನೂ ಅನುವಾದ ಮಾಡಿದ್ದಾರೆ.

ಬಹುಮುಖ ಪ್ರತಿಭಾಶಾಲಿ ಶ್ರೀ ವಿದ್ವಾನ್ ವಿಶ್ವಂ ಅವರಿಗೆ ಆಂಧ್ರಪ್ರದೇಶ ಸಾಹಿತ್ಯ ಅಕಾಡಮಿಯ ಪ್ರಶಸ್ತಿಯೂ, ಆಂಧ್ರವಿಶ್ವವಿದ್ಯಾಲಯದ ಕಲಾಪ್ರಪೂರ್ಣ ಪ್ರಶಸ್ತಿಯೂ, ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ಡಾಕ್ಟರೇಟೂ ದೊರೆತಿವೆ.

ಅನಂತಪುರಂ ಜಿಲ್ಲೆಯ ತರಿಮೆಲ ಗ್ರಾಮದಲ್ಲಿ 1915 ರಲ್ಲಿ ಜನಿಸಿದ ವಿಶ್ವಂ ಅವರ ಪೂರ್ತಿ ಹೆಸರು ವಿಶ್ವರೂಪಾಚಾರಿ. ಮದರಾಸು ವಿಶ್ವವಿದ್ಯಾಲಯದಲ್ಲಿ ವಿದ್ವಾನ್ ಪದವಿಯನ್ನು ಗಳಿಸಿದ ನಂತರ ಅವರನ್ನು ವಿದ್ವಾನ್ ವಿಶ್ವಂ ಎಂದು ಗುರುತಿಸಲಾಯಿತು. ಆಂಧ್ರಜ್ಯೋತಿ, ಆಂಧ್ರಪ್ರಭ, ಆಂಧ್ರಪತ್ರಿಕ, ಮೊದಲಾದ ಪತ್ರಿಕೆಗಳಲ್ಲಿ ಅವರು ಕೆಲಸಮಾಡಿದ್ದಾರೆ. ಕೆಲಕಾಲ ಉಪಾಧ್ಯಾಯರಾಗಿಯೂ ಕೆಲಸ ಮಾಡಿದ ಶ್ರೀಯುತರು ಮಕ್ಕಳ ಮನದ ಬಗ್ಗೆಯೂ ಪರಿಶೋಧನೆ ಮಾಡಿ ಬರೆದರು. ಶಿಶುಹೃದಯಂ, ಶಿಶುರಹಸ್ಯಂ ಅವರ ಕೊಡುಗೆಗಳು.

ಕೆಲವರ್ಷಗಳ ಹಿಂದೆ ವಿದುರರಾದ ಶ್ರೀ ವಿಶ್ವಂ ಅವರಿಗೆ ಇಬ್ಬರು ಪುತ್ರರೂ, ಇಬ್ಬರು ಪುತ್ರಿಯರೂ ಇದ್ದಾರೆ.

ವಿಷ್ಣು ಶರ್ಮನ ಪಂಚತಂತ್ರವನ್ನು ತೆಲುಗಿಗೆ ಅನುವಾದ ಮಾಡಿದ್ದಾರೆ ಸಪ್ತಗಿರಿ ಚಿಂತನ ಶೀರ್ಷಿಕೆಯಲ್ಲಿ ಬರೆಯುತ್ತಿದ್ದ ಅವರು, ಮಾಣಿಕ್ಯವೀಣ, ಅವಿ–ಇವಿ, ಮೊದಲಾದ ಅಂಕಣಗಳನ್ನೂ ಪ್ರಭಾವ ಪೂರ್ಣವಾಗಿ ನೀಡಿದ್ದರು.

ಶ್ರೀಯುತರ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು ಸಪ್ತಗಿರಿ ಸ್ವಾಮಿಯನ್ನು ಬೇಡುತ್ತದೆ.

—ಸಂಪಾದಕ.

ಉತ್ಸವಗಳು ವೈವಿಧ್ಯ ಪೂರ್ಣವಾಗಿ ನಡೆ
ಯಶಸ್ಸು ಪಡೆದವು.

ದಿನಾಂಕ 9 ಹಾಗೂ 10 ರಂದು ನಡೆದ
ಪುರಂದರ ಉತ್ಸವವನ್ನು ಶ್ರೀ ವಿರೂಪಾಕ್ಷ ಸ್ವಾ
ಗುಡಿ ಬೀದಿಯ ಎದರು ಬಸವನ ಮುಂದೆ ಪ್ರತ್ಯೆ
ವಾಗಿ ಸಿಂಗರಗೊಂಡ ಶ್ರೀಪುರಂದರ ಮಂಟಪ
ಹೊಸಪೇಟೆ ಶಾಸಕ ಶ್ರೀ ಬಿ. ಕೊಂಡಯ್ಯ ಅ
ಅಧ್ಯಕ್ಷತೆಯಲ್ಲಿ ಕರ್ನಾಟಕದ ಉನ್ನತ ಶಿ
ಸಚಿವ ಡಾ॥ ಜೀವರಾಜ ಆಳ್ವ ಅವರು ಉದ್ಘಾ
ಸುತ್ತ ಮಾತನಾಡಿ, ಇಂತಹ ಸಾಂಸ್ಕೃ
ಸಾಹಿತ್ಯ ಉತ್ಸವಗಳು ಹೆಚ್ಚಿದಷ್ಟೂ ಏಕತಾಭಾ
ಹೆಚ್ಚುವುದೆಂದೂ ನುಡಿದರು. ದಕ್ಷಿಣ ವಲ
ಸಾಂಸ್ಕೃತಿಕ ಕೇಂದ್ರದ ನಿರ್ದೇಶಕಿ ಶ್ರೀಮತಿ ಶೀ
ಪ್ರಿಯ ಅವರು ಇಂತಹ ಉತ್ಸವಗಳನ್ನು ವಿ
ಗೀಯ, ಜಿಲ್ಲಾಮಟ್ಟದಲ್ಲೂ ನಡೆಸುವಂತೆ
ಬೇಕು, ಆಗುತ್ತಿದೆ ಎಂದರು. ಕರ್ನಾಟ
ಕನ್ನಡ ಮತ್ತು ಸಂಸ್ಕೃತಿ ಇಲಾಖಾಮಂತ್ರಿ
ಎಂ. ಪಿ. ಪ್ರಕಾಶ್ ಸ್ವಾಗತಿಸಿದ ಉದ್ಘಾಟ
ಸಭೆಯಲ್ಲಿ ಕೊಪ್ಪಳ ಲೋಕ ಸಭಾ ಸದಸ್ಯ
ಎಚ್. ಜಿ. ರಾಮುಲು ಅವರು ಮುಖ್ಯ ಅತಿ
ಳಾಗಿ ಮಾತನಾಡಿ, ಇಂತಹ ಉತ್ಸವ ಪ್ರ
ರ್ಷವೂ ನಡೆದು ವಿಜಯನಗರದ ಇತಿಹಾ
ಮಾಹಿತಿ ಎಲ್ಲರಿಗೂ ಸಿಗುವಂತಾಗಲಿ ಎಂ
ಹಾರೈಸಿದರು. ಕನ್ನಡ ಸಂಸ್ಕೃತಿ ಇಲಾ
ನಿರ್ದೇಸಕ ಶ್ರೀ ಅ. ರಾ. ಚಂದ್ರಹಾಸಗು
ಅವರು ವಂದಿಸಿದರು.

ನಂತರ ನಡೆದ ಪುರಂದರ ವಿಚಾರ ಸಂಕಿರ
ಳಲ್ಲಿ ಪ್ರೊ॥ ಎಸ್. ಕೆ. ರಾಮಚಂದ್ರರಾವ್,
ಬಿ. ಎಸ್. ಕೆ. ಶಾಸ್ತ್ರಿ, ಶ್ರೀಮತಿಯರಾದ ಟಿ. ಶಾ
ಟಿ. ಶಚೀದೇವಿ, ಪದ್ಮ ಗುರುದತ್, ಸುಕನ್ಯ ಪ್ರ
ಕರ್, ಲಲಿತಾ ಶ್ರೀನಿವಾಸನ್, ಡಾ॥ ಎಲ್.
ವರಾಜು, ಡಾ॥ ರಾ. ಸತ್ಯನಾರಾಯಣ ಮೊ
ಲಾದವರು ಬೋಧಪ್ರದವಾಗಿ ಪುರಂದರ ಪ್ರಾ
ಸ್ತ್ಯವನ್ನು ವಿವರಿಸಿದರು.

ಪುರಂದರ ಉತ್ಸವದಂಗವಾಗಿ ನಡೆದ ಸಾಂಸ್ಕೃ
ಕಾರ್ಯಕ್ರಮಗಳಲ್ಲಿ ಪಂಡಿತ ಬಸವರಾಜ ರಾ
ಗುರು, ಶ್ರೀಮತಿ ಶ್ರೀರಂಗಂ ಗೋಪಾಲರತ್ನ
ಸಂತ ಭದ್ರಗಿರಿ ಅಚ್ಯುತದಾಸ್ ಸರ್ವಶ್ರೀ ಆರ್.
ಶ್ರೀಕಂಠನ್, ಶ್ರೀ ಶ್ರೀಪತಿ ಪಡಿಗಾರ್, ಆಚಾಯ
ಶ್ರೀಧರದಾಸ್ ಮೊದಲಾದವರೂ ಹಲವಾ
ನೃತ್ಯಶಾಲೆಗಳೂ ಭಾಗವಹಿಸಿದ್ದವು.

11–10–87 ರಂದು ವಿಜಯನಗರ ದಸ
ಉತ್ಸವವನ್ನು ಜಿ. ಪ. ಅಧ್ಯಕ್ಷ ಶ್ರೀ ಭಾವಿ ಬೆ
ಪ್ಪನವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ನಗರಾ

# ತಿ.ತಿ.ದೇ. ಬೋರ್ಡ್ ತೀರ್ಮಾನಗಳು 30-9-87

ತಿ. ತಿ. ದೇ. ಗಳ ಶ್ರೀ ವೆಂಕಟೇಶ್ವರ ಮ್ಯೂಸಿಯಂನ ಮಾರ್ಗದರ್ಶಿ ಉಪಾಧ್ಯಾಯರಿಗೆ 1100-40-1500-50-2050 ರೂಗಳ ಹೊಸ ವೇತನ ಶ್ರೇಣಿಯನ್ನು ನೀಡಲು ತೀರ್ಮಾನಿಸಲಾಯಿತು.

* * * *

ಉತ್ತರ ಪ್ರದೇಶದ ಡೆಹರಾಡೂನ್ ಬಳಿಯ ರಾಜಪುರದ ಶ್ರದ್ಧಾನಂದ ಆಶ್ರಮವನ್ನು ತಿ. ತಿ. ದೇ.ಗಳ ಆಡಳಿತದಲ್ಲಿ ತೆಗೆದು ಕೊಳ್ಳಲು ಅನುವಾಗುವಂತೆ ಅದನ್ನು ಷೆಡ್ಯೂಲು-1 ರಲ್ಲಿ ಸೇರಿಸಲು ಆಂಧ್ರಪ್ರದೇಶ ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* * * *

ಎಸ್.ವಿ. ಬಾಲಮಂದಿರದ 9 ನೇ ತರಗತಿಯ ಚಿ॥ ಆರ್. ಸಂಗೀತಾ ಅಗ್ನಿ ಅಪಘಾತಕ್ಕೆ ಸಿಕ್ಕಾಗ ಉಂಟಾದ ಗಾಯಗಳ ಚಿಕಿತ್ಸೆಗಾಗಿ ವೆಲ್ಲೂರಿನ ಸಿ. ಎಂ. ಸಿ. ಆಸ್ಪತ್ರೆಗೆ ಸೇರಿಸಿದ್ದು, ಆ ಬಗ್ಗೆ ಮಾಡಿದ ವೆಚ್ಚವನ್ನು ಅನುಮೋದಿಸಲಾಯಿತು.

* * * *

ತಿ.ತಿ.ದೇ. ಗಳ ಸಮಾಚಾರ ಕೇಂದ್ರ ಹಾಗೂ ಕಲ್ಯಾಣ ಮಂಟಪಗಳಲ್ಲಿ ಕೋಣೆಗಳನ್ನು ಬಾಡಿಗೆಗೆ ನೀಡುವಾಗ ಹವಾನಿಯಂತ್ರಿತ ಕೋಣೆಗೆ 100ರೂ ಹಾಗೂ ಹವಾನಿಯಂತ್ರಿತವಲ್ಲದ ಕೋಣೆಗೆ 50 ರೂಗಳ ಶಾಶ್ವತ ಧನವನ್ನು ಪಡೆದು ಬಾಡಿಗೆದಾರರು ಖಾಲಿಮಾಡಿದಾಗ ಈ ಹಣವನ್ನು ಹಿಂದಿರುಗಿಸಬೇಕು ಎನ್ನುವ ನಿಯಮವನ್ನುಂಟು ಮಾಡಲು ತೀರ್ಮಾನಿಸಲಾಯಿತು.

* * * *

ತಿರುಪತಿಯ 2 ಹಾಗೂ 3 ನೇ ಸತ್ರಗಳಿಗೆ ಹೋಗುವ ರೈಲ್ವೆ ಕ್ರಾಸಿಂಗ್ ಬಳಿಯ 20 ಅಡಿ ಅಗಲದ ರಸ್ತೆಯನ್ನು 60 ಅಡಿ ಅಗಲದ ರಸ್ತೆಯನ್ನಾಗಿ ಪರಿವರ್ತಿಸಲು ಸಾಧ್ಯವಾಗುವಂತೆ, ಸಾರ್ವಜನಿಕರಿಂದ ಸ್ಥಳವನ್ನು ಪಡೆದು (ಕಂದಾಯ ಇಲಾಖೆಯ ದರಗಳ ಸೂಚನೆಯಂತೆ) ರಸ್ತೆ ಕೆಲಸವನ್ನು ಸುಗಮಗೊಳಿಸಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ಧಾರ್ಮಿಕ ಸಹಾಯಧನ ಯೋಜನೆಯ ತಜ್ಞ ಸಮಿತಿಯಲ್ಲಿನ ಸದಸ್ಯರ ಸಂಖ್ಯೆಯನ್ನು 8 ಮಂದಿಗೆ ಮಿತಗೊಳಿಸಿ, ಕೆಳಕಂಡವರನ್ನು ಆಯ್ಕೆ ಮಾಡಲು ತೀರ್ಮಾನಿಸಲಾಯಿತು.

ಶ್ರೀ ಐ. ಎಲ್. ಎಸ್. ಶಾಸ್ತ್ರಿ (ಅಧ್ಯಕ್ಷರು)
(ತಿ. ತಿ. ದೇ. ಬೋರ್ಡ್ ಸದಸ್ಯರು)
ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ
(ಪದನಿಮಿತ್ತ ಸದಸ್ಯರು)
ಶ್ರೀ ಎಸ್. ಸುಬ್ಬರೆಡ್ಡಿಯಾರ್
ಶ್ರೀ ಆದ್ಯ ರಾಮಾಚಾರ್ಯ
ಶ್ರೀ ಎಸ್. ಬಿ. ರಘುನಾಥಾಚಾರ್ಯ
ಶ್ರೀಮತಿ ನಾಯನಿ ಕೃಷ್ಣಕುಮಾರಿ.
ಶ್ರೀ ತೂಮಾಟಿ ದೋಣಪ್ಪ
ಶ್ರೀ ನಾಗಿರೆಡ್ಡಿ (ತಿ.ತಿ.ದೇ. ಬೋರ್ಡ್ ಸದಸ್ಯರು)

ಸಪ್ತಗಿರಿಯ ಸಂಪಾದಕರು ಈ ಸಮಿತಿಯ ಕಾರ್ಯದರ್ಶಿ ಆಗಿರುತ್ತಾರೆ

* * * *

ತಿ. ತಿ. ದೇ ಧಾರ್ಮಿಕ ಪುಸ್ತಕಗಳ ಮಾರಾಟವನ್ನು ವ್ಯಾಪಕಗೊಳಿಸಲು, ಸಪ್ತಗಿರಿಯ ಆಯ್ದ ಏಜಂಟರ (500 ಪ್ರತಿಗಳಿಗಿಂತ ಹೆಚ್ಚಿಗೆ ಮಾರಾಟ ಮಾಡುವವರಲ್ಲಿ) ಹಾಗೂ ಪ್ರಮುಖ ಪ್ರಕಟನಕಾರರ ಸಮಾವೇಶವನ್ನು ಕರೆಯಲು ತೀರ್ಮಾನಿಸಲಾಯಿತು.

* * * *

ಪೂರ್ವಗೋದಾವರಿಯ ಪೀಠಾಪುರದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣದ ವಿಷಯವನ್ನು ಸ್ಥಳೀಯ ಶ್ರೀ ವೆಂಕಟಾಚಲ ಕಲ್ಯಾಣ ಮಂಡಪ ನಿರ್ಮಾಣ ಸಮಿತಿಯವರು 75000 ರೂಗಳನ್ನು ತಮ್ಮ ವಂತಿಗೆಯಾಗಿ ನೀಡಿದ್ದರೂ, ಉಚಿತವಾಗಿ ಸ್ಥಳವನ್ನು ನೀಡಲು ಸಿದ್ಧರಾದ ಮೇಲೆ, ಪರಿಶೀಲಿಸಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ಅರಣ್ಯ ಇಲಾಖೆಯವರ ತಿರುಮಲೆಯ ಸಸ್ಯ-ಸೌಂದರ್ಯದ ಯೋಜನೆಯನ್ನು 1987-88 ಕ್ಕಾಗಿ ಅನುಮೋದಿಸಲಾಯಿತು.

* * * *

ತಿರುಪತಿಯಲ್ಲಿ ಇಂಡಿಯನ್ ಕಾಫೀ ಬೋರ್ಡ್‌ನವರಿಗೆ ಗುತ್ತಿಗೆಗೆ ನೀಡಿರುವ ಎಸ್. ವಿ. ಕ್ಯಾಂಟೀನ್ ಕಾಂಪ್ಲೆಕ್ಸ್‌ನ ಒಂದು ಭಾಗಕ್ಕೆ ತಿಂಗಳಿಗೆ 2000 ರೂಗಳಂತೆ ಬಾಡಿಗೆ ಪಡೆಯಲೂ, ಗುತ್ತಿಗೆ ಅವಧಿ ಮುಗಿದ ಮೇಲೆ ಈ ಭಾಗದ ಗುತ್ತಿಗೆಯನ್ನು ಬಹಿರಂಗ ಹರಾಜಿನಲ್ಲಿ ತೀರ್ಮಾನಿಸುವ ಬಗ್ಗೆ ಪರಿಶೀಲಿಸಬೇಕೆಂದೂ ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ಎಸ್. ವಿ. ಮೂಗ ಬಧಿರ ಪಾಠಶಾಲೆಯ ಸ್ಪೀಚ್ ಥೆರಪಿಸ್ಟ್, ಹುದ್ದೆಗೆ ಸರ್ಕಾರದಲ್ಲಿ ಯಂತೆಯೇ 900-1500 ವೇತನ ಶ್ರೇಣಿಯನ್ನು ನೀಡಿ ಈ ಹುದ್ದೆಯ ಹೆಸರನ್ನು ಸ್ಪೀಚ್ ಪೆಥಾಲಜಿಸ್ಟ್, ಎಂದು ಬದಲಾಯಿಸಲು ತೀರ್ಮಾನಿಸಲಾಯಿತು.

* * * *

ಕೃತಕ ಅಂಗ ಜೋಡಣೆ ಕೇಂದ್ರದಲ್ಲಿನ ಬಳಕೆಗಾಗಿ ಆರ್ಟಿಫಿಷಿಯಲ್ ಲಿಂಬ್ ಮ್ಯಾನುಫ್ಯಾಕ್ಚರಿಂಗ್ ಸೆಂಟರ್ ಆಫ್ ಇಂಡಿಯಾ (ಸರಕಾರಿಸಂಸ್ಥೆ) ಕಾನ್ಪುರದಿಂದ 2.60 ಲಕ್ಷರೂಗಳ ವಸ್ತುಗಳನ್ನು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ವಾಸವಾಗಿದ್ದು ಅಲ್ಲಿಂದ ತಿರುಪತಿಯ ಬಳಿಯ ಚೆರ್ಲೋಪಲ್ಲಿಯ ಕಾಟತೋಪು ಪ್ರದೇಶಕ್ಕೆ ಸ್ಥಳಾಂತರಿಸಲ್ಪಟ್ಟವರ ಮಕ್ಕಳಿಗಾಗಿ ಕಾಟತೋಪು ಪ್ರದೇಶದಲ್ಲಿ ಒಂದು ಪ್ರೈಮರಿ ಶಾಲೆಯನ್ನು ಆರಂಭಿಸಲು ತೀರ್ಮಾನಿಸಲಾಯಿತು.

* * * *

ಪ್ರಕಾಶಂ ಜಿಲ್ಲೆಯ ವೇಟಪಾಳೆಂದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣ ಮಾಡಲು ತೀರ್ಮಾನಿಸಲಾಯಿತು. *

---

(ಹಿಂದಿನ ಪುಟದಿಂದ)

ವೃದ್ಧಿ ಸಚಿವ ಶ್ರೀ ಎಂ. ಚಂದ್ರ ಶೇಖರ್ ಅವರು ಉದ್ಘಾಟಿಸಿದರು.

ಈ ಉತ್ಸವಗಳಿಗಾಗಿ ಮೂರು ವೇದಿಕೆಗಳು- ಪುರಂದರ ಮಂಟಪ, ವಿದ್ಯಾರಣ್ಯ ಮಂಟಪ, ಚಿನ್ನಾದೇವಿ ಮಂಟಪಗಳನ್ನು ನಿರ್ಮಿಸಲಾಗಿದ್ದು, ಸುಮಾರು 750 ಕಲಾವಿದರು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಪಾಲುಗೊಂಡರು. ಜನಪದ ಕಲಾವಿದರನ್ನು ರಾಘವಾಂಕ, ವ್ಯಾಸರಾಯ, ಹಕ್ಕಬುಕ್ಕ ಬಳಗಗಳೆಂದು ಮೂರು ಗುಂಪುಗಳಾಗಿ ವಿಂಗಡಿಸಿದ್ದು ಮೂರು ಗುಂಪುಗಳು ಮೂರು ಮಂಟಪಗಳಲ್ಲಿ ಪರಿಚಕ್ರಕ್ರಮದಲ್ಲಿ ಪ್ರದರ್ಶನಗಳನ್ನು ನೀಡಿದವು,

11 ರಂದು ವೇದಾಂತಂ ಸತ್ಯನಾರಾಯಣ ಶರ್ಮರ ಕೂಚುಪುಡಿ ನೃತ್ಯ, ಬುರ್ರಕಥೆ, ನಾಟಕ ಏಕಪಾತ್ರಾಭಿನಯನಗಳೂ ಶ್ರೀ ವೆಂಕಟ ಶಿವಯ್ಯ ಸಂಗಡಿಗರಿಂದ ಭುವನ ವಿಜಯಂ (ಪುರಂದರ ಮಂಟಪ) ನಡೆದವು. ಅಂತೇ ಶ್ರೀ ವೆಂಕಟಶಿವಯ್ಯ ಸಂಗಡಿಗರಿಂದ (ವಿದ್ಯಾರಣ್ಯ ಮಂಟಪದಲ್ಲಿ) ಅಷ್ಟಾವಧಾನ ಕಾರ್ಯಕ್ರಮವಿದ್ದಿತು. ಮಾರನೆಯದಿನ ಪುರಂದರ ಮಂಟಪದಲ್ಲಿ ಶ್ರೀ ಮಾಡುಗುಲ ನಾಗಫಣಿಶರ್ಮರಿಂದ ಅಷ್ಟಾವಧಾನ ಕಾರ್ಯಕ್ರಮ, ಶ್ರೀ ಜಾನುಮದ್ದಿ ಹನುಮತ್ ಶಾಸ್ತ್ರಿಯವರಿಂದ ಉಭಯ ಭಾಷೆಗಳಲ್ಲಿ ಚಮತ್ಕಾರದಂತೆ ನಡೆದ ನಿರ್ದೇಶನ, ಪೃಚ್ಛಕರಾಗಿ ಸರ್ವಶ್ರೀ ಎಂ. ಕೊಂಡಮಾಚಾರ್ಯ, ಗೋಪೀನಾಥ್, ರಾಮಪ್ರಸಾದ್, ಮಲ್ಲಿಕಾರ್ಜುನ ಶರ್ಮ ಪಿ. ಶ್ರೀನಿವಾಸಾಚಾರ್ಯ ಮೊದಲಾದವರು,

12 ರಂದು ಸಂಜೆ ಭಾರೀ ಮೆರವಣಿಗೆ ಏರ್ಪಾಡಾಗಿದ್ದು ಅಸಂಖ್ಯಾತ ಜನ ಭಾಗವಹಿಸಿದ್ದಿತು.

*

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ. — ಡಿಸೆಂಬರ್ 1987

**ಅಮೃತಾಪುರದ ಅಮೃತೇಶ್ವರ**
– ಡಾ॥ ಯು. ರಾಮಭಟ್ಟ

**ನಿಜಗುಣ ಶಿವಯೋಗಿ**
– ಆರ್. ರಾಮಕೃಷ್ಣ

**ಪ್ರಾರ್ಥನೆಯ ರಹಸ್ಯ**
– ಬಾಲಚಂದ್ರ ಇನಾಮದಾರ

**ಇತಿಹಾಸದಲ್ಲಿ ಮಾಧ್ವಮತ**
– ಕಪ್ಪ ರಾಮಾಚಾರ್ಯ

**ಸಂತ ವನಿತಾರತ್ನಗಳು**
– ಸಿ. ಗೋವಿಂದಾಚಾರ್ಯ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಇದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ –

ಸಂಪಾದಕರು
ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯ ದಿನಗಳು

### ಡಿಸೆಂಬರ್ 1987

| | | |
|---|---|---|
| 2. | ಬುಧವಾರ | ಚಕ್ರತೀರ್ಥ ಮುಕ್ಕೋಟಿ |
| 4. | ಶುಕ್ರವಾರ | ಶ್ರೀದತ್ತ ಜಯಂತಿ<br>ತಿರುಮಂಗೈ ಆಳ್ವಾರ್ ಶಾತ್ತುಮೊರೆ |
| 5. | ಶನಿವಾರ | ಕಪಿಲತೀರ್ಥ ಮುಕ್ಕೋಟಿ,<br>ತಿರುಪ್ಪಾಣಾಳ್ವಾರ್ ವರ್ಷ ತಿರುನಕ್ಷತ್ರ |
| 16. | ಬುಧವಾರ | ಧನುಸ್ಸಂಕ್ರಮಣ ಪೂಜಾ ಪ್ರಾರಂಭ |
| 20. | ಭಾನುವಾರ | ತೊಂಡರಡಿಪ್ಪೊಡಿ ಆಳ್ವಾರ್ ವರ್ಷ ತಿರುನಕ್ಷತ್ರ |
| 30. | ಬುಧವಾರ | ವೈಕುಂಠ ಏಕಾದಶಿ |
| 31. | ಗುರುವಾರ | ಮುಕ್ಕೋಟಿ ದ್ವಾದಶಿ,<br>ಸ್ವಾಮಿಪುಷ್ಕರಿಣೀ ತೀರ್ಥ ಮುಕ್ಕೋಟಿ,<br>ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |

## ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಡಿಸೆಂಬರ್ 1987ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

2, 3, 6, 15, 24, 29, 42, 50, 66, 69 to 73, 77, 79, 84, 84A, 123, 124, 126, 128, 162, 169, 181, 201, 203 to 206, 211, 217, 249, 253, 261, 264, 276, 279 to 281, 284, 287, 288, 290, 292, 293, 295, 396, 391, 392, 398, 399, 401, 405, 408, 409, 411, 415, 423, 560, 568, 569, 571, 572, 574, 575, 577, 579, 580 to 584, 1077 to 1102, 1104 to 1111, 1113 to 1123, 1125 to 1162, 1164 to 1171.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ. ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

## ವರ್ಣಮಯ ಕ್ಯಾಲೆಂಡರ್ 1988

ಶ್ರೀವೆಂಕಟೇಶ್ವರ ಸ್ವಾಮಿ, ಶ್ರೀ ಪದ್ಮಾವತೀ ಅಮ್ಮನವರ ಚಿತ್ರಗಳದ್ದು.

ತಿರುಮಲೆಯ ಆರು ವಿವಿಧ ದೃಶ್ಯಗಳಿರುವುದು.

ಶ್ರೀ ವೆಂಕಟೇಶ್ವರ ಸ್ವಾಮಿ ಚಿತ್ರ ವಿರುವುದು.

ಆರುಪುಟಗಳ ಕ್ಯಾಲೆಂಡರ್ (ತೆಲುಗು) ಬಿಡುಗಡೆ ಯಾಗಲಿವೆ.

ನಿಮ್ಮ ಪ್ರತಿಗಳಿಗಾಗಿ ಬರೆಯಿರಿ –

**ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ**
**ಸೇಲ್ಸ್ ವಿಂಗ್, ತಿ. ತಿ. ದೇ. ತಿರುಪತಿ.**

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

